ಖಾಸಗಿ ಪ್ರಸಾರಕ್ಕೆ ಮಾತ್ರ



ಸಂಪುಟ - 9

ಅಕ್ಟೋಬರ್-ದಶಂಬರ್

2005

ಸಂಚಿಕೆ - 2

ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ



ಕೆ.ವಿ. ಸುಬ್ಬಣ್ಣ




# ಶಿವರಾಮ ಕಾರಂತ ವೇದಿಕೆ (ರಿ.)

'ಆದರ್ಶ', ನಂ. 307, 17ನೇ ಅಡ್ಡರಸ್ತೆ, 2ನೇ ವಿಭಾಗ
ರವೀಂದ್ರನಾಥ ಟಾಗೋರ್‌ನಗರ, ಬೆಂಗಳೂರು-560 032
ದೂರವಾಣಿ : 23336822 / 23336087
ಇ-ಮೇಲ್: pcchadaga@hotmail.com


## ಕಾರ್ಯಕಾರಿ ಮಂಡಳಿ

ಅಧ್ಯಕ್ಷರು : ಶ್ರೀಮತಿ ಪ್ರೇಮಾಭಟ್

ಉಪಾಧ್ಯಕ್ಷರು : ಶ್ರೀಮತಿ ರಾಧಾ ರಾಮಸ್ವಾಮಿ
ಶ್ರೀ ಎಸ್.ಆರ್. ವಿಜಯಶಂಕರ್

ಕಾರ್ಯದರ್ಶಿ : ಶ್ರೀ ಪಾ. ಚಂದ್ರಶೇಖರ ಚಡಗ

ಸಹಕಾರ್ಯದರ್ಶಿ : ಡಾ|| ಆರ್.ಆರ್. ಪಾಂಗಾಳ್

ಖಜಾಂಚಿ : ಶ್ರೀ ವಿ.ಟಿ.ಎಸ್. ರಾವ್

## ಕಾರ್ಯಕಾರಿ ಸಮಿತಿಯ ಸದಸ್ಯರು

ಸರ್ವಶ್ರೀ

1. ಬಿ.ವಿ. ಕೆದಿಲಾಯ
2. ಸಾ.ರಾ. ವಾರಂಬಳ್ಳಿ
3. ಸೀತಾರಾಮ್ ಪಿ.ಎಚ್‌ಡಿ.
4. ನಾ. ರಾಮಸ್ವಾಮಿ
5. ವಿ.ಎಸ್. ಭಟ್
6. ಎ. ವಾಸುದೇವರಾವ್
7. ಶ್ರೀಮತಿ ಶ್ಯಾಮಲಾ ಸತ್ಯ
8. ಶ್ರೀ ರಾ.ಶ್ರೀ. ನಾಯ್ಡು

ವ್ಯವಸ್ಥಾಪಕ ಸಂಪಾದಕರು : ಶ್ರೀ ಪಾ. ಚಂದ್ರಶೇಖರ ಚಡಗ
ಗೌರವ ಸಂಪಾದಕರು : ಶ್ರೀ ಬಿ.ವಿ. ಕೆದಿಲಾಯ

ಖಾಸಗಿ ಪ್ರಸಾರಕ್ಕೆ ಮಾತ್ರ



# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ

ಸಂಪುಟ - 9 ಅಕ್ಟೋಬರ್ - ಡಿಸೆಂಬರ್ 2005 ಸಂಚಿಕೆ - 2

ಈ ಸಂಚಿಕೆಯಲ್ಲಿ . . .


ಸಂಪಾದಕೀಯ - ಬಿ.ವಿ. ಕೆದಿಲಾಯ .... 2

ಶಿವರಾಮ ಕಾರಂತರ ಹುಟ್ಟುಹಬ್ಬ - ಸಾಸ್ತಾನದಲ್ಲಿ .... 4

ಬೇಂದ್ರೆ ಕಾವ್ಯಯಾನ
- ಡಾ॥ ಸತ್ಯಧ್ಯಾನ ಜೈನಾಪೂರ್ .... 6

ಗಿರೀಶ್ ಕಾರ್ನಾಡರ ನಾಟಕಗಳು
- ಬಿ.ಆರ್. ನಾಗೇಶ್ .... 12

ಚದುರಂಗ
- ಆರ್.ಆರ್. ಪಾಂಗಾಳ್ .... 18

ಕೆ.ವಿ. ಸುಬ್ಬಣ್ಣ ಸಂಸ್ಮರಣೆ .... 25

ಮಹಾತ್ಮ ಹುತಾತ್ಮನಾದಂದು
- ರವಿ ಕೃಷ್ಣಾರೆಡ್ಡಿ .... 27

ಅತಿಥಿ (ಕವನ)
- ಪ್ರೇಮಾಭಟ್ .... 31

ಸಂಪಾದಕೀಯ

# ಸಾಟಿಯಿಲ್ಲದ ಸಾಧಕ: ಕೆ.ವಿ. ಸುಬ್ಬಣ್ಣ

ಇತೀಚೆಗೆ (ಜುಲೈ 16) ಕಣ್ಮರೆಯಾದ ಹೆಗ್ಗೋಡಿನ ಕೆ.ವಿ. ಸುಬ್ಬಣ್ಣನವರು ಕನ್ನಡ ಸಾಂಸ್ಕೃತಿಕ ಲೋಕದ ಸಾಟಿಯಿಲ್ಲದ ಸಾಧಕರು. ಸಾಹಿತ್ಯ ರಚನೆ, ಪುಸ್ತಕ ಪ್ರಕಾಶನ, ರಂಗಭೂಮಿ, ಸಿನೆಮಾ, ಸಾಮಾಜಿಕ ಚಿಂತನೆ ಮುಂತಾದ ಹಲವು ಮುಖಗಳಲ್ಲಿ ಅಸಾಧಾರಣವಾದ ಸಾಧನೆಯನ್ನು ಅವ್ಯಾಹತವಾಗಿ ಸುಮಾರು ಅರ್ಧ ಶತಮಾನ ಕಾಲ ವಿನಮ್ರತೆಯಿಂದ ಮಾಡಿದವರು. ಅವರ ಸುಮಾರು 40 ಸಾಹಿತ್ಯ ಕೃತಿಗಳು ಮೌಲಿಕ ವಿಚಾರಧಾರೆಯಿಂದ ವಿಶಿಷ್ಟವಾಗಿವೆ. ಅವರು ಅಕ್ಷರ ಪ್ರಕಾಶನದ ಮೂಲಕ ಪ್ರಕಟಿಸಿದ ಸುಮಾರು 500 ಪುಸ್ತಕಗಳು ತಮ್ಮ ಸತ್ವ ಹಾಗೂ ಮಹತ್ವಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ. ಗೋಪಾಲಕೃಷ್ಣ ಅಡಿಗರ ಸಂಪಾದಕತ್ವದಲ್ಲಿ ಅವರು ಸುಮಾರು 20 ವರ್ಷ ಕಾಲ ಪ್ರಕಟಿಸಿದ 'ಸಾಕ್ಷಿ' ಪತ್ರಿಕೆ ಕನ್ನಡ ಸಾಹಿತ್ಯದಲ್ಲಿ ಹೊಸ ಚಿಂತಕರನ್ನು ಬೆಳಕಿಗೆ ತಂದಿತು. ಕನ್ನಡದಲ್ಲಿ ಆವರೆಗೆ ಕಾಣದ ಪ್ರಬುದ್ಧ ವಿಮರ್ಶೆಯನ್ನು ಬೆಳೆಸಿತು. ಅವರು ಕಟ್ಟಿ ಬೆಳೆಸಿದ 'ನೀನಾಸಂ' ಸಂಸ್ಥೆ ನಾಡಿನ ರಂಗಭೂಮಿಯ ಚಟುವಟಿಕೆಗಳಿಗೆ ಹೊಸ ಆಯಾಮವನ್ನು ನೀಡಿತಲ್ಲದೆ, ನೂರಾರು ಕಲಾವಿದರನ್ನು, ರಂಗಕರ್ಮಿಗಳನ್ನು ಸೃಷ್ಟಿಸಿತು. ಅವರು ನಡೆಸುತ್ತ ಬಂದ ಚಲನಚಿತ್ರರಸಗ್ರಹಣ ಶಿಬಿರಗಳಿಂದ ಸಿನೆಮಾ ಮಾಧ್ಯಮದ ಅತ್ಯುತ್ತಮ ಕಲಾಕೃತಿಗಳನ್ನು ನೋಡಿ ಆಸ್ವಾದಿಸುವ ಅಭಿರುಚಿ ಬೆಳೆಯಿತು. ಇದೆಲ್ಲವನ್ನು ಅವರು ತಮ್ಮ ಹುಟ್ಟೂರಾದ ಹೆಗ್ಗೋಡಿನಲ್ಲಿಯೇ ಬೆಳೆಸಿದರು. ಅಲ್ಲಿ ಅವರು ಹಚ್ಚಿದ ದೀಪ ನಾಡಿನಾದ್ಯಂತ ಬೆಳಗಿತು. ಈಗಲೂ ಬೆಳಗುತ್ತಿದೆ. ಅನನ್ಯ ಎಂಬ ಪದ ಅವರ ಸಾಧನೆಗೆ ಅನ್ವರ್ಥಕವಾಗಿದೆ.

ಸುಬ್ಬಣ್ಣನವರು ಗಾಂಧೀಜಿ, ಲೋಹಿಯಾ, ಶಿವರಾಮ ಕಾರಂತರವರ ವಿಚಾರಧಾರೆಗಳಿಂದ ಆರಂಭದಲ್ಲಿ ಪ್ರಭಾವಿತರಾದರೂ, ಕಾಲಕ್ರಮೇಣ, ಎಲ್ಲಾ ಪ್ರತಿಭಾಶಾಲಿಗಳಂತೆ ಅದೆಲ್ಲವನ್ನು ಜೀರ್ಣಿಸಿಕೊಂಡು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಪಾಕಗೊಳಿಸಿ, ಸಮಗ್ರ ದೃಷ್ಟಿಯಿಂದ ವಿಭಿನ್ನ ಸಾಂಸ್ಕೃತಿಕ ಚಟುವಟಿಕೆಗಳನ್ನು ಸಂಘಟಿಸಿದರು. ಹಣ ಅವರಿಗೆ ಎಂದೂ ಮುಖ್ಯವಾಗಿರಲಿಲ್ಲ. ಅಕ್ಷರ ಪ್ರಕಾಶನದಲ್ಲೇ ಅವರು ಆರಂಭದ ಕೆಲವು ವರ್ಷಗಳಲ್ಲಿ ಸುಮಾರು 15 ಲಕ್ಷ ರೂಪಾಯಿಗಳಷ್ಟು ನಷ್ಟ ಅನುಭವಿಸಿದ್ದರು. ಆದರೆ ಅವರ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳು ಅದಮ್ಯವಾಗಿದ್ದುದರಿಂದ, ಕಷ್ಟನಷ್ಟಗಳನ್ನೆಲ್ಲ ಜೀರ್ಣಿಸಿಕೊಂಡು ತಾವು ನಂಬಿದ ದಾರಿಯಲ್ಲಿ ಮುನ್ನಡೆದರು. ಅವರ ಕೆಲಸದ ಬಗ್ಗೆ ಕೆಲಮಂದಿ ಸಂಕುಚಿತ ಮನೋಭಾವದ ವ್ಯಕ್ತಿಗಳು

ಕೊಂಕು ನುಡಿದರೂ, ಮ್ಯಾಗ್ಸೇಸೆಯಂತಹ ವಿದೇಶೀ ಸಂಸ್ಥೆಗಳು ಅವರ ಮಹತ್ವವನ್ನು ಗುರುತಿಸಿದ್ದು ಈಗ ಇತಿಹಾಸ.

ಸುಬ್ಬಣ್ಣನವರು ಶ್ರೇಷ್ಠ ಸಾಧಕರಾದರೂ ಶ್ರೇಷ್ಠತೆಯ 'ವ್ಯಸನ' ಅವರಿಗಿರಲಿಲ್ಲ. ಅನಕ್ಷರಸ್ಥ ರೈತನೂ ತನಗೆ ಸಮಾನ ಎಂದು ಅವರು ದೃಢವಾಗಿ ನಂಬಿದ್ದರು. ಹೀಗಾಗಿ ಅತ್ಯುತ್ತಮ ಸಿನೆಮಾ, ನಾಟಕ, ಉಪನ್ಯಾಸ,ಚರ್ಚೆಗಳನ್ನು ಹೆಗ್ಗೋಡಿನ ಸುತ್ತುಮುತ್ತಣ ಹಳ್ಳಿಗರು ನೋಡಿ ಆಸ್ವಾದಿಸುವುದು ಸಾಧ್ಯವಾಯಿತು. ಜಾಗತೀಕರಣದ ಶಕ್ತಿಗಳು ನಮ್ಮ ಸಂಸ್ಕೃತಿಯ ಬೇರುಗಳನ್ನು ನಾಶಮಾಡತೊಡಗಿರುವ ಇಂದಿನ ಸಂದರ್ಭದಲ್ಲಿ ಸುಬ್ಬಣ್ಣನವರು ತೋರಿದ ದಾರಿ ಅರ್ಥಪೂರ್ಣ ಸಾಂಸ್ಕೃತಿಕ ಪರ್ಯಾಯವಾಗಿದೆ.

ಸುಬ್ಬಣ್ಣನವರು ಶಿವರಾಮಕಾರಂತರ ಅಭಿಮಾನಿಯಾಗಿದ್ದವರು. ಕಾರಂತರ ಹೆಸರಿನಲ್ಲಿ ಒಂದು ಸುಸಜ್ಜಿತ ರಂಗಮಂದಿರವನ್ನು 1971ರಲ್ಲೇ ಹೆಗ್ಗೋಡಿನಲ್ಲಿ ಕಟ್ಟಿಸಿದವರು. ಕಾರಂತರ ಯಕ್ಷಗಾನದ ವಿವಿಧ ಪ್ರಯೋಗಗಳಿಗೆ ತುಂಬು ಬೆಂಬಲ ನೀಡಿದವರು. ಕಾರಂತರು ಕಳೆದ ಶತಮಾನದ 30ರ ದಶಕದಲ್ಲಿ ಪುತ್ತೂರಿನಲ್ಲಿ ನಡೆಸುತ್ತಿದ್ದ ರಂಗಪ್ರಯೋಗಗಳ ಮುಂದುವರಿಕೆಯ ಛಾಯೆಯನ್ನು 'ನೀನಾಸಂ'ನ ವೈವಿಧ್ಯಮಯ ಚಟುವಟಿಕೆಗಳಲ್ಲಿ ಕಾಣಬಹುದು. ತನ್ನ ಮೇಲೆ ಹೆಚ್ಚು ಪ್ರಭಾವ ಬೀರಿದ ಸಾಹಿತಿಗಳಲ್ಲಿ ಕಾರಂತರು ಮುಖ್ಯರು ಎಂದು ಅವರು ಒಂದು ಕಡೆ ಹೇಳಿದ್ದಾರೆ. ಕಾರಂತರ ಸಮಾಜಮುಖಿದೃಷ್ಟಿ ಅವರ ಚಟುವಟಿಕೆಗಳಿಗೆ ದೊರೆತ ಪ್ರೇರಣೆಗಳಲ್ಲಿ ಒಂದಾಗಿತ್ತು. ಸುಬ್ಬಣ್ಣನವರ ಪಾಲಿಗೆ ರಂಗಭೂಮಿ ಒಂದು 'ದೇಖಾವೆ' (Show) ಯಾಗಿರಲಿಲ್ಲ. ಅದೊಂದು 'ಸಮುದಾಯದ ಸಾಂಸ್ಕೃತಿಕ ವ್ರತ'ವಾಗಿತ್ತು. ಈ ವ್ರತನಿಷ್ಠೆಯನ್ನು, ಹಣವೇ ಸರ್ವಸ್ವವಾಗಿರುವ ವ್ಯಾಪಾರೀಕರಣದ ಈ ದಿನಗಳಲ್ಲಿ ಉಳಿಸಿದ, ಬೆಳೆಸಿದ ಅಪೂರ್ವ ವ್ಯಕ್ತಿ ಸುಬ್ಬಣ್ಣ.

'ಯಾರು ಸಮಾಜದಿಂದ ಪಡೆದುದಕ್ಕಿಂತ ಹೆಚ್ಚನ್ನು ಸಮಾಜಕ್ಕೆ ನೀಡುತ್ತಾರೋ, ಅವರದ್ದು ಸಾರ್ಥಕ ಬದುಕು' ಎನ್ನುವುದು ಕಾರಂತರು ದೃಢವಾಗಿ ನಂಬಿದ್ದ ಆದರ್ಶ. ಆ ದೃಷ್ಟಿಯಿಂದಲೂ ಸುಬ್ಬಣ್ಣನವರದ್ದು ಅತ್ಯಂತ ಸಾರ್ಥಕ ಬದುಕು. ಸಮಾಜಕ್ಕೆ ಅವರು ನೀಡಿದ ಅನನ್ಯ ಕೊಡುಗೆಯನ್ನು ನಾಡು ಎಂದಿಗೂ ಮರೆಯಬಾರದು. ಸುಬ್ಬಣ್ಣ ತಾವು ಕಟ್ಟಿಸಿದ ಸಂಸ್ಥೆಗೆ ಕೆ.ವಿ. ಅಕ್ಷರರಂಥ ಸಮರ್ಥ ವಾರಸುದಾರರನ್ನೂ ತಯಾರು ಮಾಡಿ ಹೋಗಿರುವುದು ಒಂದು ಸಮಾಧಾನದ ಅಂಶ. ಅಕ್ಷರ ಅವರ ನೇತೃತ್ವದಲ್ಲಿ ಹೆಗ್ಗೋಡಿನ ಸಾಂಸ್ಕೃತಿಕ ದೀಪ ಮತ್ತಷ್ಟು ಉಜ್ವಲವಾಗಿ ಬೆಳಗಲಿ ಎಂದು ಹಾರೈಸೋಣ.

– ಸಂಪಾದಕ

ಪತ್ರಿಕಾ ವರದಿ

# ಶಿವರಾಮ ಕಾರಂತರ ಹುಟ್ಟುಹಬ್ಬ - ಸಾಸ್ತಾನದಲ್ಲಿ

''ಸಂಸ್ಕೃತಿಯನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯಲು ಗ್ರಾಮೀಣ ಪ್ರದೇಶದ ಯುವಜನತೆ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು'' ಎಂದು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಉಪ್ಪುಂದ ಚಂದ್ರಶೇಖರ ಹೊಳ್ಳ ಹೇಳಿದರು.

ಸಾಸ್ತಾನದ ಶಿವರಾಮ ಕಾರಂತ ವೇದಿಕೆ, ಲಯನ್ಸ್ ಕ್ಲಬ್ ಬ್ರಹ್ಮಾವರ ಬಾರ್ಕೂರು, ರೋಟರಿ ಹಂಗಾರಕಟ್ಟೆ ಸಾಸ್ತಾನ ಮತ್ತು ಸಾಲಿಗ್ರಾಮ - ಕೋಟ ಇನ್ನರ್ ವೀಲ್ ಕ್ಲಬ್ ಸಂಯುಕ್ತ ಆಶ್ರಯದಲ್ಲಿ ಸೋಮವಾರ ಚಡಗರ ಅಗ್ರಹಾರ ಪಾಂಡೇಶ್ವರದಲ್ಲಿ ಶಿವರಾಮ ಕಾರಂತರ 104ನೇ ಹುಟ್ಟುಹಬ್ಬದ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.



*ಶಿವರಾಮಕಾರಂತರ 104ನೆಯ ಹುಟ್ಟುಹಬ್ಬದ ಕಾರ್ಯಕ್ರಮ ಶಿವರಾಮ ಕಾರಂತ ವೇದಿಕೆಯ ಸಾಸ್ತಾನ ಶಾಖೆಯಲ್ಲಿ 10.10.2005ರಂದು ಪಾಂಡೇಶ್ವರದ ಚಡಗರ ಅಗ್ರಹಾರದ ಶಿವರಾಮ ಕಾರಂತ ರಂಗಸ್ಥಳದಲ್ಲಿ ಜರುಗಿತು. ಶಿವರಾಮ ಕಾರಂತ ವೇದಿಕೆಯ ಸಾಸ್ತಾನ ಶಾಖೆಯ ಅಧ್ಯಕ್ಷರಾದ ಎಚ್. ಗೋಪಾಲಕೃಷ್ಣ ಶೆಟ್ಟಿ, ಪ್ರೊ. ಉದ್ಯಾವರ ಮಾಧವ ಆಚಾರ್ಯ, ಡಾ. ಮಾಧವಿ ಭಂಡಾರಿ, ಪಾ. ಚಂದ್ರಶೇಖರ ಚಡಗ, ಯು. ಚಂದ್ರಶೇಖರ ಹೊಳ್ಳರನ್ನು ಚಿತ್ರದಲ್ಲಿ ಕಾಣಬಹುದು.*

ಕಾರಂತರು ಇಲ್ಲದಾಗಲೂ ಕೂಡ ಅವರ ನೆನಪುಗಳೇ ನಮಗೆ ಸ್ಫೂರ್ತಿಯಾಗಬೇಕು. ಮಕ್ಕಳಲ್ಲಿ ಸಾಹಿತ್ಯದ ಅಭಿರುಚಿಯನ್ನು ಹೆಚ್ಚಿಸುವುದರಿಂದ ಕಾರಂತಜ್ಜನಿಗೆ ನಿಜವಾದ ನಮನ ಮಾಡಿದಂತಾಗುವುದು ಎಂದು ಅವರು ಹೇಳಿದರು.

ನಿಯೋಜಿತ ಭಾಷಣ ಮಾಡಿದ ತಾಲೂಕು ಸಾಹಿತ್ಯ ಪರಿಷತ್ ಅಧ್ಯಕ್ಷೆ ಡಾ. ಮಾಧವಿ ಭಂಡಾರಿ ಪ್ರೇಮಚಂದ್ರರ 'ಗೋದಾನ' ಹಾಗೂ ಕಾರಂತರ 'ಚೋಮನದುಡಿ'ಯನ್ನು ಹೋಲಿಸಿ ಈ ಎರಡು ಕಾದಂಬರಿಗಳು ಶೋಷಣೆಗೆ ಒಳಗಾದವರ ತುಡಿತ ಮಿಡಿತಗಳನ್ನು ಅತ್ಯಂತ ಸಮರ್ಥವಾಗಿ ಹೇಳುತ್ತವೆ ಎಂದರು.

''ಕಾರಂತರ ಕೃತಿಗಳು ಆಳವಾದ ಅಧ್ಯಯನಕ್ಕೆ ಸೂಕ್ತ. ಒಳಗೊಂದು ಹೊರಗೊಂದು ವ್ಯಕ್ತಿತ್ವ ಅವರಲ್ಲಿ ಇಲ್ಲ. ಹೊರಗೆ ಈ ಸಮಾಜದ ಮೂಢನಂಬಿಕೆ, ಕಟ್ಟುಕಟ್ಟಳೆಗಳ ಬಗ್ಗೆ ಆಕ್ರೋಶವಿದ್ದರೆ, ಒಳಗೆ ಸಮಾಜದ ಬಗ್ಗೆ ಕಳಕಳಿ ಪ್ರೀತಿ ವಿಶ್ವಾಸವಿತ್ತು. ಕಾರಂತರ ವ್ಯಕ್ತಿತ್ವ ನನ್ನನ್ನು ಸೆರೆ ಹಿಡಿದಿದೆ'' ಎಂದು ಅಧ್ಯಕ್ಷತೆ ವಹಿಸಿದ್ದ ಪ್ರೊ. ಉದ್ಯಾವರ ಮಾಧವ ಆಚಾರ್ಯ ಹೇಳಿದರು.

ವೇದಿಕೆಯಲ್ಲಿ ಕಾರಂತ ವೇದಿಕೆಯ ಕಾರ್ಯದರ್ಶಿ ಪಾಂಡೇಶ್ವರ ಚಂದ್ರಶೇಖರ ಚಡಗ, ಎಚ್. ಗೋಪಾಲಕೃಷ್ಣ ಶೆಟ್ಟಿ, ಲಯನ್ಸ್ ಅಧ್ಯಕ್ಷ ಶ್ರೀರಾಮ ನೀಲಾವರ, ರೋಟರಿ ಕ್ಲಬ್ ಅಧ್ಯಕ್ಷ ಜಿ. ಗೋಪಾಲ ಗಾಣಿಗ, ಇನ್ನರ್‌ವೀಲ್ ಕ್ಲಬ್‌ನ ಅಧ್ಯಕ್ಷೆ ಸಿ. ಯಶೋದಾ ಹೊಳ್ಳ, ಮಾಲಿನಿ ಮಲ್ಯ ಉಪಸ್ಥಿತರಿದ್ದರು.

ಚಂದ್ರಶೇಖರ ಚಡಗ ಸ್ವಾಗತಿಸಿ ಪ್ರಾಸ್ತಾವಿಕ ಮಾತನಾಡಿದರು. ಯಶೋದಾ ಬಿ. ಹೊಳ್ಳ ವಂದಿಸಿದರು. ರಾಮಕೃಷ್ಣ ಚಡಗ ಕಾರ್ಯಕ್ರಮ ನಿರ್ವಹಿಸಿದರು.

*('ಉಷಾಕಿರಣ' ದಿನಾಂಕ 11-10-05)*

# ಬೇಂದ್ರೆ ಕಾವ್ಯಯಾನ

– ಡಾ॥ ಸತ್ಯಧ್ಯಾನ ಜೈನಾಪೂರ್

'ರಸವೇ ಜನನ/ ವಿರಸ ಮರಣ / ಸಮರಸವೇ ಜೀವನ' ಎಂಬ ಉನ್ನತ ಜೀವನ ಸಿದ್ಧಾಂತವನ್ನು ಕನ್ನಡದ ಮುಖಾಂತರ ವಿಶ್ವಕ್ಕೆ ತಮ್ಮ ಕಾವ್ಯದ ಅಮೃತವಾಣಿಯಾಗಿ ಸಾರಿದ ಕಳೆದ ಶತಮಾನದ ಕವಿ ಬೇಂದ್ರೆ ಯುಗದ ಕವಿ. 'ಹಾಡಿ ಹಣ್ಣಾದಿ ನೀ? ಜಗದ ಕಣ್ಣಾದಿ ನೀ' ಎಂದು ಗುರುದೇವ ರವೀಂದ್ರನಾಥ ಠಾಕೂರರ ಬಗೆಗೆ ಅವರು ಹಾಡಿದ ಈ ಸಾಲುಗಳು ಬೇಂದ್ರೆಯವರಿಗೆ ಹೆಚ್ಚು ಅನ್ವಯವಾಗುತ್ತ ಹೋಗಿವೆ. ಅವರನ್ನು ಕುರಿತು ಹೇಳುವ 'ವರಕವಿ' ಎಂಬ ಪದ ಈಗ ಸವಕಳಿ ಪದವಾಗಿ ಹೋಗಿದೆ. ಅವರ ಕಾವ್ಯದ ಅಧ್ಯಯನಕ್ಕೆ ಅದನ್ನು ಅರ್ಥೈಸಿಕೊಳ್ಳುವುದಕ್ಕೆ ಒಂದು ಪೂರ್ಣ ಆಯುಷ್ಯ ಸಾಕಾಗದು. ವ್ಯಾಸ, ವಾಲ್ಮೀಕಿ, ಕಾಳಿದಾಸ, ಡಾಂಟೆ ಮತ್ತು ಷೇಕ್ಸ್‌ಪಿಯರ್ ಮುಂತಾದ ವಿಶ್ವ ಪ್ರತಿಭೆಗಳ ಸಾಲಿನಲ್ಲಿ ಅವರಿಗೆ ಸ್ಥಾನ ಸಲ್ಲುತ್ತದೆ.

ಬೇಂದ್ರೆ ಕಾವ್ಯವನ್ನು ಅಭ್ಯಸಿಸಿ, ಅನುಭವಿಸಿಯೇ ಸವಿಯಬೇಕು, ಆನಂದಿಸಬೇಕು. ಆ ಮಹೋನ್ನತ ಕಾವ್ಯದ ಪೈಲುಗಳ ಬಗೆಗೆ ತಿಳಿದುಕೊಳ್ಳುವುದು, ಒಂದು ಸೀಮಿತ ಲೇಖನದಲ್ಲಿ ಅವರ ಕಾವ್ಯದ ಬಗೆಗೆ ಬರೆಯುವುದು ಎಂದರೆ ಸಾಗರವನ್ನು ತೆಕ್ಕೆಯಲ್ಲಿ ಹಿಡಿಯುವ ಹುಚ್ಚು ಸಾಹಸ ಮಾಡಿದಂತೆ! ಆದರೂ ಈ ಲೇಖನದಲ್ಲಿ ಬೇಂದ್ರೆ ಕಾವ್ಯದ ಮೂಲಭೂತ ವೈಶಿಷ್ಟ್ಯಗಳನ್ನು ಸಾರಾಂಶರೂಪದಲ್ಲಿ ನಿವೇದಿಸಿದ ಒಂದು ಚಿಕ್ಕ, ವಿನೀತ ಪ್ರಯತ್ನ ಮಾಡಲಾಗಿದೆ.

ಬೇಂದ್ರೆ ನವೋದಯದ ಮುಂಚೂಣಿಯಲ್ಲಿದ್ದು ತಮಗರಿವಿರದೆಯೇ ಕನ್ನಡ ಕಾವ್ಯವನ್ನು ನಡೆಸಿದವರು, ಬೆಳೆಸಿದವರು, ಪುಷ್ಟಿಗೊಳಿಸಿದವರು. 'ಗೆಳೆಯರ ಗುಂಪು' ಅವರು ಪೋಷಿಸಿಕೊಂಡು ಬಂದು ಒಂದು 'ಕವಿಶಾಲೆ' ಉತ್ತರ ಕರ್ನಾಟಕದ ಈ 'ಕವಿ-ಗರಡಿಮನೆ' ಮುಂದೆ ಹೆಸರಾಂತ ಕವಿ ಪ್ರತಿಭೆಗಳನ್ನು ಕನ್ನಡಕ್ಕೆ ನೀಡಿತು ಎಂಬುದು ಈಗ ಇತಿಹಾಸ. ಈ ಅವಧಿಯಲ್ಲಿ ಅವರ ಹಲವು ಕವನ ಸಂಕಲನಗಳು ಪ್ರಕಟವಾದದ್ದು ವಿಶೇಷ ಅಂಶವಾಗಿದೆ. ಅವರ ಕವಿ ವ್ಯಕ್ತಿತ್ವ, ಕಲಾತ್ಮಕ ವ್ಯಕ್ತಿತ್ವ ಅರಳುವುದಕ್ಕೆ ಈ ಅವಧಿ ಬಹಳ ವಿಶಿಷ್ಟವಾಗಿದೆ. ಕಾವ್ಯದ ಕಲ್ಪನೆ, ಬೆಳವಣಿಗೆ ಮುಂತಾದ ಪ್ರಧಾನ ಅಂಶಗಳಲ್ಲೂ ಈ ಕಾಲಖಂಡದಲ್ಲಿ ಗಮನಾರ್ಹ ಬದಲಾವಣೆ ಕಾಣಬಹುದು.

ಬೇಂದ್ರೆ ಇಂತಹ ಕವಿ ಎಂದು ವರ್ಗೀಕರಿಸಿ ಹಣೇ ಪಟ್ಟಿ ಕಟ್ಟಿ ಕೂಡಿಸುವುದು ಅರೆ-ಬೆಂದ ವಿಮರ್ಶಕರ ಕೆಲಸವಾಗಿ ಬಿಡುತ್ತದೆ. ಅಲ್ಲದೆ ಹಾಗೆ ಮಾಡುವುದು ಅವರ ಸಮಗ್ರ ಕಾವ್ಯದ ಎತ್ತರಕ್ಕೆ ಅನ್ಯಾಯವೆಸಗಿದಂತೆ. ಅದು ಕೇವಲ ನಮ್ಮ ಗ್ರಹಿಕೆಯ, ತಿಳಿವಳಿಕೆಯ ಇತಿಮಿತಿಯನ್ನು ಪ್ರದರ್ಶಿಸುತ್ತದೆ. ಅವರ ಕಾವ್ಯದ ಅಖಂಡತ್ವದ ಆಳದಲ್ಲಿ ಇಳಿದು ಅಭ್ಯಸಿಸಿದಾಗಲೇ ಸಮರ್ಪಕ 'ಅರಿವು' (Enlightenment) ಆಗುವ ಸಾಧ್ಯತೆ (Possibility) ಉಂಟು. ಆಗಿಯೇ ಬಿಡುತ್ತದೆ ಎಂಬ ಖಾತ್ರಿ ಏನೂ ಇಲ್ಲ. ಬೇಂದ್ರೆ ಅವರೇ ವ್ಯಾಖ್ಯೆಗಳಿಂದ ವಸ್ತುಗಳನ್ನು ಹುಡುಕುವ ಪ್ರಕ್ರಿಯೆಗೆ ವಿರೋಧ ವಾಗಿದ್ದರು ಎಂಬುದನ್ನು ಗಮನಿಸಬೇಕು. ವಿಮರ್ಶಕರು ಹೇಳಿದಂತೆ 'ಕಾವ್ಯ ಒಂದು ದಿವ್ಯ ರಹಸ್ಯ. ಅದು ಭವ ಮಂಥನ ತಂತ್ರ.'

ಬೇಂದ್ರೆ ಕಾವ್ಯ ವೈಪುಲ್ಯದ ಕಾವ್ಯ. ಅದನ್ನೇ ಮೊಕಾಶಿಯವರು ಬಹು ವಿಶಿಷ್ಟವಾಗಿ 'ಭೂರಿಕಾವ್ಯ' (The Poetry of abundance) ಎಂದು ಕರೆಯುತ್ತಾರೆ. 'ವರಕವಿಯಲ್ಲಿ ಭಾವ, ನಾದ ಭಾಷೆಗಳು ಸಂಪೂರ್ಣ ಸಹಕಾರದಿಂದ ಅವತರಿಸಿ ಅವಳಿ-ಜವಳಿ-ತ್ರಿವಳಿ ಯಾಗಿ ಜನ್ಮ ಪಡೆಯುತ್ತವೆ' ಎಂದು ಅವರು ಮುಂದುವರೆದು ವಿಶ್ಲೇಷಿಸಿಸುತ್ತಾರೆ. ಬೇಂದ್ರೆ ಕಾವ್ಯ ಭಾಷೆಯಲ್ಲಿ ವೈವಿಧ್ಯಮಯ ಅಲಂಕಾರಗಳನ್ನು ವಿಪುಲವಾಗಿ ಬಳಸಿದ ಕವಿ. ಆದ್ದರಿಂದ ಈ ತ್ರಿವಳಿ ಅಂಶದ ಜೊತೆಗೆ 'ಅಲಂಕಾರವನ್ನು' ಸೇರಿಸಬಹುದು ಎಂದು ಹಿರಿವಿಮರ್ಶಕ ಆಮೂರರು ಅಭಿಪ್ರಾಯ ಪಡುತ್ತಾರೆ. ಒಟ್ಟು ಕಾವ್ಯಭಾಷೆಯ ಕಲ್ಪನೆಯಲ್ಲಿ 'ಅಲಂಕಾರದ' ಅಂಶ ಸಮ್ಮಿಳಿತವಾಗಿದೆ ಎಂದು ಮೊಕಾಶಿ ಅವರು ಅದನ್ನು ಬಿಟ್ಟಿರಲು ಸಾಕು. ಅದು ಏನೇ ಇದ್ದರೂ ಬೇಂದ್ರೆಯವರೇ ಕಾವ್ಯ ಸೃಷ್ಟಿಯ ಬಗೆಗೆ ಹೇಳಿದಂತೆ: 'ಕಾವ್ಯ ಚತುರ್ಮುಖ ಸಿದ್ಧಿ. ಕವಿಯ ವ್ಯಕ್ತಿತ್ವ, ವಾದಿಯ ಚಾತುರ್ಯ ವಿಮರ್ಶಕ ವಾಗ್ಮಿಯ ಗುಣಗ್ರಾಹಕತೆ ಮತ್ತು ಗಮಕಿಯ ಹಾಡುಗಾರಿಕೆಯನ್ನು ಅವಲಂಬಿಸಿದೆ.' ಅಂದರೆ ಕಾವ್ಯದ ವಸ್ತು ಅಥವಾ ಕವಿಯ ಭಾವನೆ - ಅದನ್ನು ವ್ಯಕ್ತ ಪಡಿಸಲು ಅವನ ಬಳಸಿದ ಭಾಷೆ (Poetic Language) ಮತ್ತು ನಾದಮಯತೆ. ಅವರ ಕಾವ್ಯವನ್ನು ಅರಿತುಕೊಳ್ಳಲು ಮಾಡಬೇಕಾದ ಪ್ರಯತ್ನಕ್ಕೆ ಈ ಹೇಳಿಕೆ ಮಾರ್ಗದರ್ಶನ ವಾದುದರಿಂದ ಈ ಲೇಖನ ಆ ದಾರಿ ಗುರುತಿಸಿದೆ. ಆ ಜಾಡಿನಲ್ಲಿ ಮುಂದುವರಿದಿದೆ.

'ಪಂಪ ಕುಮಾರವ್ಯಾಸ ಎಂಬೀ ಕವಿಗಳಿಗೆ ತವರು ಮನೆಯೆನಿಸಿದ ಧಾರವಾಡದ ಸೀಮೆಯವರು' ಎಂದು ಬೇಂದ್ರೆ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. (ಜ್ಞಾನಪೀಠ ಪ್ರಶಸ್ತಿ ಭಾಷಣ) ಅವರು ಹಳಗನ್ನಡದ ಸತ್ವವನ್ನು ಹೀರುತ್ತಾ ಲಾವಣಿ ಕಾರರು, ವಚನಕಾರರು ದಾಸರೊಂದಿಗೆ ಪಯಣಿಸುತ್ತ ಸಂಸ್ಕೃತದ ವಾಲ್ಮೀಕಿ, ಕಾಳಿದಾಸ ರನ್ನು, ಸವಿಯುತ್ತ ವೇದ-ಉಪನಿಷತ್ತುಗಳ ಸಾರವನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತ ಡಾಂಟೆ, ಮಿಲ್ಟನ್, ಶೆಲ್ಲಿ, ಕೀಟ್ಸ್, ವರ್ಡ್ಸ್‌ವರ್ಥರ ಕಾವ್ಯವನ್ನು ಅಭ್ಯಸಿಸುತ್ತ, ಬೆಳೆದ

ಕವಿ. ಅರವಿಂದರ ಕಾವ್ಯ ಮತ್ತು ತಾತ್ವಿಕ ಪ್ರಣಾಲಿಯಂತೆ ಹಲವು ದಾರ್ಶನಿಕರಿಂದಲೂ, ಪ್ರಭಾವಿತರಾಗಿದ್ದರು. ಅವರ ಕಾವ್ಯಕ್ಕೆ, ಸಾಹಿತ್ಯಕ್ಕೆ ಮೂಲದ್ರವ್ಯ, ಸ್ರೋತ ಸುತ್ತಲಿನ ಜೀವನ. ಜನಜೀವನದ ಎಲ್ಲ ಮುಖಗಳನ್ನು ಅನುಭವಿಸಿ, ಆಳವಾಗಿ ಗ್ರಹಿಸಿ, ವಿಶ್ಲೇಷಿಸಿ ಅವರು ಕಾವ್ಯರಚಿಸಿದರು. 'ಬೆಂದರೆ ಬೇಂದ್ರೆಯಾಗುವರು' ಎಂಬುದು ಕ್ಲೀಷೆ ಅನಿಸಿದರೂ ಶಬ್ದ ಚಮತ್ಕಾರವಲ್ಲದ ಅಪ್ಪಟ ಸತ್ಯ. ಅವರು ಜನರ, ಜನಪದದ ಭಾಗವಾಗಿ ಬೆಳೆದವರು. ಧಾರವಾಡ ಪ್ರದೇಶದ ಸಾಂಸ್ಕೃತಿಕ, ನೈಸರ್ಗಿಕ, ಸಾಮಾಜಿಕ, ಜೀವನ ಅನುಭವಿಸಿ ಕಾವ್ಯ ರಚಿಸಿದವರು ಅವರು. ಸಾಧನಕೇರಿಯಲ್ಲಿ ತಮ್ಮ ಮನೆಯೆದುರು ಹೋಗಿ ಬರುವ ಹಳ್ಳಿ ಜನ, ಬೆಣ್ಣೆ, ಹಣ್ಣು-ತರಕಾರೀ ಮಾರುವವರು. ಬುಡಬುಡಕಿಯವರು ಘಂಟೆ ಚೌಡೇರು, ಅಲೇಮಾರಿಗಳು, ಜೋಗತಿಯರು, ಹಾಡುವವರು ಹೀಗೆ ಜನಪದದ ಉಸಿರನ್ನು ಕುತೂಹಲದಿಂದ ಅನುಭವಿಸಿ, ಆ ಜೀವನದ ಅನಂತಗರ್ಭದಲ್ಲಿ ಹೊಕ್ಕು, ಆಡುನುಡಿಯ ಸೃಜನಾತ್ಮಕ ಪ್ರಯೋಗಗಳನ್ನು ಮಾಡಿ, ಹೃದಯಕ್ಕೆ ನೇರವಾಗಿ ಸೇರುವ ಭಾವನೆಗಳನ್ನು ವಿಲಕ್ಷಣ ಪ್ರತಿಭೆಯಿಂದ ಕಾವ್ಯದಲ್ಲಿ ಭಟ್ಟಿ ಇಳಿಸಿದವರು. ಪ್ರೀತಿ, ಪ್ರೇಮ, ಪ್ರಣಯ, ದಾಂಪತ್ಯ ಪ್ರೇಮ, ಬಡತನ, ದಾರಿದ್ರ್ಯ, ಹಸಿವೆ, ದುಃಖ, ಹುಟ್ಟು-ಸಾವು ಹೆಣ್ಣು ಗಂಡಿನ ಸಂಬಂಧ, ಸಂಸಾರ, ಸರಸ-ವಿರಸ, ಲೌಕಿಕ-ಅಲೌಕಿಕ, ನಿಸರ್ಗ ಹೀಗೆ ಒಂದು ಕಡೆಯಾದರೆ, ಆದಿದೈವಿಕ, ಆಧ್ಯಾತ್ಮಿಕ, ಆದಿಭೌತಿಕ, ಭಾವನೆಗಳನ್ನು - ವಸ್ತುಗಳನ್ನು ಕಾವ್ಯ ಭಟ್ಟಿಯಲ್ಲಿ ಮೂಸೆಹೊಯ್ದರು. ಭಾರತೀಯ ಸಂಸ್ಕೃತಿಯ ಒಂದು ವಿಹಂಗಮ ನೋಟವೇ ಅವರ ಕಾವ್ಯದಲ್ಲಿ ದೊರೆಯುತ್ತದೆ. (ರಮಣ ಹೃದಯ, ಅಮೃತಾನುಭವ, ಮಾತಾಡು ಲಿಂಗವೇ, ಶಬ್ದ - ಚೈತ್ಯಾಲಯ, ಪ್ರಳಯ ಸೃಷ್ಟಿ ಮೂರ್ತಿ ಮತ್ತು ಕಾಮ ಕಸ್ತೂರಿ, ಹೃದಯ ಸಮುದ್ರ, ಕವಿರಸಿಕನಿಗೆ ಇತ್ಯಾದಿ) ಬೇಂದ್ರೆ ಸ್ಪರ್ಶಿಸದ, ಸ್ಪಂದಿಸದ ಕಾವ್ಯ ವಸ್ತುಗಳಿಲ್ಲ. ಭಾವನಾ ಪ್ರಪಂಚವಿಲ್ಲ. ಅವರು ತಮ್ಮ ಬದುಕಿಗೂ ಕಾವ್ಯ ಸೃಷ್ಟಿಗೂ ಅಂತರವನ್ನು ಕಾಣಲಿಲ್ಲ. ಅವರ ಬದುಕೇ ಒಂದು ತರಹದ ಕಾವ್ಯ. ಕಾವ್ಯವನ್ನೇ ಅವರು ಉಸಿರಿಸಿದರು. ಅವರ ಉಸಿರೇ ಕಾವ್ಯವಾಗಿತ್ತು. ಸಹಜವಾಗಿ ಮಾತನಾಡಿದಾಗಲೂ ಭಾವ, ಭಾಷೆ, ಅರ್ಥ ಮತ್ತು ನಾದಮಯತೆ ತಾನೇ ತಾನಾಗಿ ಪ್ರಯತ್ನವಿಲ್ಲದೆ ಹೊರಹೊಮ್ಮುತ್ತಿತ್ತು ಎಂಬುದು ಅವರ ಸಂಪರ್ಕ ಬಂದವರೆಲ್ಲರೂ ಒಪ್ಪುತ್ತಾರೆ. 'ಅಂಬಿಕಾತನಯದತ್ತ' ಸಾರ್ಥಕ ನಾಮವಾಗಿತ್ತು. ಭಾವದ ಮಾತಾಯಿತು. ಇನ್ನು ಶಬ್ದ-ಅರ್ಥಕ್ಕೆ ಬರುವಾ 'word' ಎಂದರೆ 'idea' ಎಂದು ತಿಳಿದವರು ಹೇಳುತ್ತಾರೆ. 'ಪರಬ್ರಹ್ಮವು-ಶಬ್ದ ಬ್ರಹ್ಮವಾಗುತ್ತದೆ ಎಂದು ಕವಿ ಅಭಿಪ್ರಾಯ ಪಡುತ್ತಾರೆ. (ಶಬ್ದ ಚೈತ್ಯಾಲಯ) ಉದಾ: ಅಲ್ಲಮನಿಗೆ. 'ಪ್ರಳಯಸೃಷ್ಟಿ' ಎಂಬ ಕವನದಲ್ಲಿ ಹೇಗೆ ಕವಿಯ ಸ್ವಪ್ರತಿಷ್ಠಿತ ಜ್ಞಾನಾಂಧಃಕಾರದಲ್ಲಿ ಕಲ್ಪನೆಯ ಉದಯವಾಗಿ ಕಾವ್ಯವು ಸೃಷ್ಟಿಪಡುತ್ತದೆ

ಎಂಬುದನ್ನು ವಿವರಿಸುತ್ತಾರೆ. ಕವಿಗಳು ಒಂದು ಅರ್ಥದಲ್ಲಿ ನೂತನ ಬ್ರಹ್ಮರು. ಹೀಗಾಗಿ ಭಾಷೆಯಲ್ಲಿ ಕಾವ್ಯ ರಚಿಸುವ ಶಕ್ತಿ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಬೇಂದ್ರೆ 'ನಿನ್ನ ಕೊಳಲಾಗಿಹುದು ನನ್ನ ಕೊರಳು' ಎಂದು ಹಾಡುತ್ತಾರೆ. ಇನ್ನೊಂದೆಡೆಗೆ 'ನನ್ನ ಕಣ್ಣೇ ಕಿವಿಯು / ಕವಿಯು ನಾನು' ಎಂದು ಅರ್ಥ ಪೂರ್ಣವಾಗಿ ನುಡಿಯುತ್ತಾರೆ.

ಬೇಂದ್ರೆ ಕವಿಯೆಂದರೆ 'ಮಾನಸಪುತ್ರ', 'ಅವನು ಆಗಸ ದೇಹಿ' ಎನ್ನುತ್ತಾರೆ. ಕವಿ ಮಾತಿನಲ್ಲಿ ಭಾವಜೀವಿಯಾಗಿ ಮೂಡುವನು. ಕಾವ್ಯ ಪ್ರಸೂತಿಯ ಈ ಕಲ್ಪನೆ ಗಮನಿಸಿ:

**ಮುನ್ನ ಬಗೆಯಲಿ ಹಾಡ ನೀನೆ ಹೆತ್ತಿ**
**ನನ್ನ ನಾಲಿಗೆ ಬರಿ ಸೂಲಗಿತ್ತಿ** (ಓ ಹಾಡೆ)

ಬೇಂದ್ರೆ 'ಶಬ್ದ ಗಾರುಡಿಗ' ಶಬ್ದಗಳು ಮಂತ್ರಗಳಂತೆ ಅವರ ನಾಲಿಗೆಯ ಮೇಲೆ ನರ್ತಿಸುತ್ತವೆ. ಆದರೆ ಒಮ್ಮೊಮ್ಮೆ 'ಶಬ್ದಗಳು ಬರೀ ಶಬ್ದಗಳೇ' ಎಂಬ ಆಕ್ಷೇಪ ಕೆಲ ವಿಮರ್ಶಕರಿಂದ ಬಂದದ್ದುಂಟು. ಅವರು ವರಕವಿ, ಪ್ರಜ್ಞಾಪೂರ್ವಕ ರಚಿಸುವ ಕಾವ್ಯದ ಕವಿ ಅಲ್ಲ. ಕಾವ್ಯ ಅವರಿಗೆ ಬಹಳ ಸಹಜವಾಗಿ, ದೈವ ಕಾಣಿಕೆಯಂತೆ ಸ್ಫುರಣವಾಗುತ್ತದೆ.

ಕಾವ್ಯ ಬರೆಯುವುದು ಒಂದು ವೈಜ್ಞಾನಿಕ ಭಾಷಾ ಪ್ರಯೋಗ ಎಂದು ಕಾಣುತ್ತಿರುವ ಈ ಕಾಲದಲ್ಲಿ ಕಾವ್ಯ ರಚನೆ ಪ್ರಯತ್ನ ಶೀಲ ಚಟುವಟಿಕೆಯಾಗಿ ಮಾರ್ಪಾಟಾಗಿದೆ. ಆದರೆ ಅವರಿಗೆ ಕಾವ್ಯಶ್ರೀ ಒಲಿದು ಬಂದುದು ವೇದ್ಯವಾಗುತ್ತದೆ. ಅವರ ಕೆಲವು ಪದ್ಯಗಳು ದುರೂಹ, ಕ್ಲಿಷ್ಟವಾಗಿರುವದರಿಂದ ವಿಮರ್ಶಕರು ದಾರಿ ತಪ್ಪುವ ಸಾಧ್ಯತೆಗಳಿವೆ. ಬೇಂದ್ರೆ, ಕಾವ್ಯದ ಆಳಕ್ಕೆ ಇಳಿಯದೇ ಮೈಪರಚಿಕೊಂಡು ಕಾವ್ಯದ ಕೆಲಭಾಗಗಳು - ಶಬ್ದಗಳು ಸಂಕೀರ್ಣವಾಗಿದ್ದು ಸಂವಹನೆಗೆ ಅಸಾಧ್ಯ ಎಂದು ನಿರ್ಣಯಕ್ಕೆ ಬರುತ್ತಾರೆ. ಮಹೋನ್ನತ ಕವಿಗಳ ಬಗೆಗೆ ಈ ತಪ್ಪು ಎಲ್ಲ ಕಾಲಖಂಡದಲ್ಲಿ ವಿಮರ್ಶಕರಲ್ಲಿ ಆಗಿದೆ. ಷೇಕ್ಸ್‌ಪಿಯರನನ್ನು ಸಮಗ್ರವಾಗಿ ಗ್ರಹಿಸಲು ಇಂಗೆಂಡಿಗೆ ಎಷ್ಟು ದಶಕ ಬೇಕಾದವು ? ಅದೇ ರೀತಿಯಲ್ಲಿ ಏಟ್ಸ ಮತ್ತು ಎಲಿಯಟ್ ಕಾವ್ಯದಲ್ಲಿ ಪಾತಾಳಗರಡಿ ಹಾಕಿ ಇಳಿಯಲು ಎಷ್ಟು ವಿಮರ್ಶಕರಿಗೆ ಸಾಧ್ಯವಾಯಿತು ? ಬೇಂದ್ರೆಯವರಿಗೆ ವಿಮರ್ಶಕರ ಬಗೆಗೆ ಅಸಮಾಧಾನ ಇದ್ದಿತು. ಅವರಿಲ್ಲದ ಸಭೆಗೆ ಮಾತ್ರ ಬರುವದಾಗಿ ಹೇಳಿದ್ದುಂಟು. ತಮ್ಮ ಕಾವ್ಯವನ್ನು ಅರಿಯುವವರನ್ನು ಅವರು ಪ್ರೋತ್ಸಾಹಿಸಿದ್ದುಂಟು. ಶಬ್ದವು ಅರ್ಥ - ಭಾವನೆಗಳಿಂದ ತುಂಬಿಕೊಂಡಿರುವುದಿಲ್ಲ. ಕವಿ ಅವುಗಳಲ್ಲಿ ಹೊಸ ಹೊಸ ಅರ್ಥ ಬರುವಂತೆ ಭಾವನೆಗಳನ್ನು ಸ್ಫುರಿಸುತ್ತಾನೆ. 'ಮಾತೆಂಬುದು ಅರ್ಥರೂಪದ ಬೆವರು' (ಸುಮ್ಮನಿರು ಓ ಮಾತೆ) ಎಂದು ನಂಬಿದ ಕವಿ ಅವರು. ಶಬ್ದಗಳನ್ನು ಅವುಗಳ ಅರ್ಥದ ಬಂಧನದಿಂದ ಪಾರುಮಾಡಿ ಭಾವರೂಪಕ್ಕೆ ಸಿದ್ಧಪಡಿಸುವ ವಿಶಿಷ್ಟ ಕಾರ್ಯವೇ

ಕಲಿಯುದು. ಅದನ್ನು ಕವಿ ಬೇಂದ್ರೆ ಅದ್ಭುತವಾಗಿಯೂ, ವಿಫುಲವಾಗಿಯೂ ಸಾಧಿಸುತ್ತಾರೆ. (ಸಪ್ತಕಲಾ, ಗಂಗಾವತರಣ, ಒಮರ ಇತ್ಯಾದಿ)

ಬೇಂದ್ರೆ, ಕಾವ್ಯದಲಿ ಭಾವ-ಭಾಷೆಗಳಂತೆ ನಾದ ಪ್ರಮುಖ ವೈಶಿಷ್ಟವಾಗಿದೆ. ಮೊಕಾಶಿಯವರು ಈ ಅಂಶದ ಮೇಲೆ ಬಹಳ ಪಾಂಡಿತ್ಯಪೂರ್ಣ ಬೆಳಕು ಚೆಲ್ಲುತ್ತಾರೆ. ಬೇಂದ್ರೆಯವರಲ್ಲಿ 'ನಾದವು ಭಾವದ ಒಡಹುಟ್ಟಾಗಿ ಒಮ್ಮೊಮ್ಮೆ ಶುದ್ಧನಾದವಾಗಿ, ಒಮ್ಮೊಮ್ಮೆ ಮಾತು-ಮಾತು ಮಥಿಸಿ ಬಂದ' ನಾದವಾಗಿ ಆನಂದಭಾವದ ಅಂಗಪ್ರವೇಶಕ್ಕೆ ಸಹಾಯಕವಾಗುತ್ತದೆ.

ಅವರ ಒಂದು ಕವನ ಸಂಗ್ರಹದ ಹೆಸರೇ ಸಾಂಕೇತಿಕವಾಗಿ 'ನಾದಲೀಲೆ'. ಅವರ ಕಾವ್ಯದ ಅನನ್ಯ ಲಕ್ಷಣವದು. 'ತಿಗುಳು ತಿಳಿಯಲೇಬೇಕು. ಜೇನ್ನೊಣ ಹೂವಿನ ರಸ ಮುತ್ತಿದ್ದಾಂಗೆ, ಗಾಳಿಸುಳಿಯಲೇ ಹೂವಿನ ಕೆಂಪು ಹಗುರು ಎತ್ತಿದ್ದಾಂಗ, ನಸುಕಿನ ಸಕ್ಕರಿ ಗಾಳಿ ಜಂಪಿನ ಮೈಗೆ ಹತ್ತಿದಾಂಗ' ಎಂದು ಕವಿ ಕಾವ್ಯ ರಸಾಸ್ವಾದನೆಯ ದಾರಿ ತೋರಿಸುತ್ತಾನೆ. ಈ ಗೊಂಚಿ ಒಳಗಣ್ಣಿಗೆ ಅರ್ಥವಾಗಬೇಕು ಎಂದು ಸೂಕ್ಷ್ಮವಾಗಿ ತಿಳಿಸಿಕೊಡುತ್ತಾನೆ. 'ಭಾವ ವ್ಯಂಜಕ ನಾದ ಶಬ್ದಗಳೇ ಭಾಷೆಯ ಹೊರಗೆ ನಿಂತು ನಾದ ದಿಂದಲೇ ಅಸ್ಫುಟ ಭಾವಗಳನ್ನು ನಿರ್ದೇಶಿಸುತ್ತದೆ. ಅವರ ಕಾವ್ಯ 'ನಾದಲೀಲೆ'ಗಳಿಂದ ಆವೃತವಾಗಿದೆ. 'ಓ ಭಾಗವತಾ ಓ ಭಾಗವತಾ' 'ಕಿಂಖಿಲ ಕಿಂಖಿಲ ಕಿಂಖಿಲ !' ಇತ್ಯಾದಿ ಅದಕ್ಕೆಂದೇ ಬೇಂದ್ರೆ, ಹರಿಸಿದ ರಸಗಂಗೆ ಅಜರಾಮರವಾಗಿ ಉಳಿದಿದೆ. 'ಕುರುಡು ಕಾಂಚಾಣ'ದ ಲಯಗಾರಿಕೆ ವಿನ್ಯಾಸ ಗಮನಾರ್ಹವಾಗಿದೆ. 'ಗಂಗಾವತರಣದ' ಶಬ್ದ ಸಂಯೋಜನೆಗಳಲ್ಲಿ ಅವರ ಈ ಲಯದ ಸಾತತ್ಯ ಗಾಢವಾಗಿ ಮೂಡಿಬಂದಿದೆ.

ಅವರ ಕಾವ್ಯದ ಛಂದಸ್ಸುಗಳ ಬಗೆಗೆ ಒಂದೆರಡು ಮಾತು, ವರ್ಣ, ಮಾತ್ರಾ ಮತ್ತು ಅಂಶ ಛಂದಸ್ಸು ಮೂರು ಪ್ರಕಾರಗಳನ್ನು ರಚಿಸಿ, ವೈದಿಕ ಛಂದಸ್ಸು ಪರಿಚಯಿಸಿ ಹಲವಾರು ಪ್ರಯೋಗಗಳನ್ನು ಮಾಡಿ ಕನ್ನಡ ಕಾವ್ಯಭಾಷೆ ಸಿರಿವಂತರಾಗಿಸಿದ್ದಾರೆ. ಅವರಲ್ಲಿ ಜಾನಪದ ಮತ್ತು ಶಿಷ್ಟ ಎರಡರ ಸಮ್ಮೇಳನವೂ ಇದೆ. ಇದೇ ಬೇಂದ್ರೆಯವರ ವೈಶಿಷ್ಟ್ಯ. (ಉದಾ: ಸಪ್ತಕಲಾ, ಸ್ವಪ್ನ ನೌಕೆ, ಪರಾಶರಾ ರೂಪಾ, ತಾನದಳೊ ತಾಯಿ ಇತ್ಯಾದಿ) ಹಲವಾರು ಕಡೆ ಕಂದಗಳನ್ನು ಬಳಸಿದ್ದಾರೆ. ಉದಾ: 'ಜೀವಲಹರಿ'ಯ ವೃತ್ತ ಲಹರಿ: 'ಮರ್ಯಾದೆಯ ಶ್ರೀಧರ' ಇತ್ಯಾದಿ. ಮಾತ್ರಾಲಯಗಳಿಗಂತೂ ಬೇಕಾದಷ್ಟು ಉದಾಹರಣೆ ಕೊಡಬಹುದು ರುದ್ರವೀಣೆ, ಗರಿ, 'ಒಂದು ಹಲವು' 'ನೂಲು' ಅಚಿಂತ್ಯ ಸರ್ವಮಂಗಲೇ ಇತ್ಯಾದಿ.

ಪ್ರಾಸಗಳ ಬಗೆಗೆ ಹೇಳುವದೇ ಬೇಡ; ಉದಾ ತುಂ ತುಂ ತುಂ ತುಂಬಿ ಬಂದಿತು..ಇತ್ಯಾದಿ.

**ಕೂಡಿದೆ ಕೈ-ಮೈ ತಾಲಕೆ ತಾಲ**
**ಅಲ್ಲಿದೆ ನೃತ್ಯದ ನಿತ್ಯ ಸೊತ್ತು**
**ಹೊಂದಿದೆ ಒಂದೆಡೆ ಪ್ರಾಸಕೆ ಪ್ರಾಸ**
**ಅದುವೆ ಕಾವ್ಯ ವಿಲಾಸದ ಗೊತ್ತು**
**ಕೂಡಿದೆ, ಹೊಂದಿದೆ ಚಿತ್ತಕೆ ಚಿತ್ರ**
**ಪವಣಿಸಿಂದಹದು ಮುತ್ತಿಗೆ ಮುತ್ತು ಇತ್ಯಾದಿ.**

ಕಾವ್ಯದುದ್ದಕೂ ಕೈ ಇಟ್ಟಲ್ಲಿ ಇಂಥ ಉದಾಹರಣೆಗಳು ಸಿಗುತ್ತವೆ.

ಕಾವ್ಯಭಾಷೆ ಅವರು ಹಿಗ್ಗಿಸಿ, ಹರವಿ, ವಿಸ್ತರಿಸಿ ತಮ್ಮ ಪ್ರತಿಭೆಯ ಕುಂಚದೊಡನೆ ಆಟವಾಡುತ್ತಾ ಹಲವಾರು ಬಣ್ಣ ಬರೆಯುತ್ತ ಆನಂದದಿಂದ ಕಾವ್ಯ ಲೀಲೆಯಾಡುತ್ತಾ ಹೋದಂತೆ ತೋರುತ್ತದೆ. ಆ ಭಾವ ಶಬ್ದ-ನಾದಗಳ ಮಾಂತ್ರಿಕ ಶಕ್ತಿಯಿಂದ ಒಂದು ಹೊಸ ಮಾಯಾಲೋಕವನ್ನು ನಿರ್ಮಿಸುತ್ತಾ ಹೋಗುತ್ತಾರೆ. ಭಾವಗೀತೆಯಲ್ಲಿಯ ನಾದದ ಅಂಶದಿಂದ ಅವರು ವಿಶಿಷ್ಟ ಸ್ಥಾನ ಪಡೆದರು. ಉದಾ: ಶ್ರಾವಣ, ಕುಣಿಯೋಣ ಬಾರ, ಫಜಾರ ಕಟ್ಟೆ ಮುಟ್ಟೋಣ ಬಾರ, ಬೆಳಗು, ಬಿಸಿಲ್ಗುದುರೆ ಇತ್ಯಾದಿ ಅವರ ಕಾವ್ಯದ ಆಳಕ್ಕಿಳಿಯುವ ಉದ್ದೇಶ ಈ ಲೇಖನಕ್ಕಿಲ್ಲ. ಒಂದು ತೀರ ಸಂಕ್ಷಿಪ್ತ ವಿಹಂಗಮ ನೋಟ ಅವರ ಕಾವ್ಯದ ಪ್ರಮುಖ ವೈಶಿಷ್ಟ್ಯಗಳನ್ನು ಅಲ್ಲಲ್ಲಿ ತಟ್ಟಿ-ಮುಟ್ಟಿ ಹೋಗುವ ಕುರುಡನ ತೆರದಿ.

ಬೇಂದ್ರೆ ತಮ್ಮ ಯುಗದ ಸಮರ್ಪಕ, ಸತ್ವಯುತ ಮತ್ತು ಸಮರ್ಥಶಾಲೀ ಪ್ರಧಾನ ಕಾವ್ಯ ಧ್ವನಿಯಾಗಿ ಕನ್ನಡಕ್ಕೆ ವಿಶ್ವಮಾನ್ಯತೆ ತಂದುಕೊಡುತ್ತಾರೆ. ಅವರಿಗೆ ಕಾವ್ಯ, ಕಾವ್ಯ-ಜೀವನ ಸರ್ವಸ್ವವಾಗಿ ಪರಿಣಮಿಸಿತು. ಲೌಕಿಕ-ಅಲೌಕಿಕ ಎರಡರಲ್ಲಿಯೂ ಅನನ್ಯ ನೆಲೆಯನ್ನು ತಮ್ಮ ಕಾವ್ಯದಲ್ಲಿ ದರ್ಶಿಸಿದರು. ಕನ್ನಡ ಭಾಷೆಯ ಬೆಳವಣಿಗೆಗೆ ಅವರ ಕಾಣಿಕೆ ಅನುಪಮವಾದುದು. 'ಕವಿಯು ಕೇವಲ ಕನಸುಗಾರನಾದರೆ ಸಲ್ಲದು. ಸುತ್ತಲಿನ ಪರಿಸರಕ್ಕೆ ಸ್ಪಂದಿಸಬೇಕು' ಎಂಬ ಕೀಟ್ಸನ ನಂಬಿಕೆಯನ್ನು ತಮ್ಮ ಕಾವ್ಯಧರ್ಮವಾಗಿಟ್ಟುಕೊಂಡರು ಬೇಂದ್ರೆ ಅವರು. ಕಾವ್ಯದ ವಾಚ್ಯ-ವ್ಯಂಗ್ಯ ಧ್ವನಿ ರಾಗ ಅಂಶಗಳನ್ನು ಅವರು ಶ್ರೀಮಂತವಾಗಿರಿಸಿದರು. ಅದಕ್ಕೆಂದೇ ಶಾಶ್ವತತೆ ಸಾರ್ವತ್ರಿಕತೆ, ಸಮೃದ್ಧಿ ಅವರ ಕಾವ್ಯಗುಣಗಳಾಗಿವೆ. ಕವಿ ಹಾಡಿ ದಣಿಯುವುದಿಲ್ಲ. ಆದರೆ ಓದುವ ಅಥವಾ ವಿಮರ್ಶಕನೇ ದಣಿದು ಆ ಕ್ಷಣಕ್ಕಾದರೂ ಪೂರ್ಣ ವಿರಾಮ ಕೊಡಬೇಕಾಗುವುದು ಎಂಬುದೇ ಬೇಂದ್ರೆ ಕಾವ್ಯದ ಹೆಗ್ಗಳಿಕೆ.



# ಗಿರೀಶ ಕಾರ್ನಾಡರ ನಾಟಕಗಳು

(ಒಂದು ವಿಮರ್ಶಾಸೂಚಿ ಪರಿಚಯ)

- ಬಿ.ಆರ್. ನಾಗೇಶ್

**ಯಯಾತಿ:** ಯಯಾತಿ ಗಿರೀಶ ಕಾರ್ನಾಡರ ಮೊದಲ ಪ್ರಕಟಿತ ನಾಟಕ. ಮಹಾಭಾರತ ದಲ್ಲಿ ಇದರ ಮೂಲಕತೆ ಇದೆ; ಈ ನಾಟಕದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ರಂಗಸಾಧ್ಯತೆಗಳ ಹೊಸ ಅನ್ವೇಷಣೆಯನ್ನು ಇಲ್ಲಿಂದ ಪ್ರಾರಂಭಿಸುತ್ತಾರೆ.

ಯಯಾತಿ ತಂದೆ, ಶರ್ಮಿಷ್ಠೆತಾಯಿ, ಪುರು ಮಗ - ಇದು ಮೂಲಕತೆಯಲ್ಲಿರುವ ಸಂಬಂಧ. ಕಾರ್ನಾಡರು ಪುರುವಿಗೆ ಬೇರೆಯ ತಾಯಿಯನ್ನು ಕೊಟ್ಟು ಶರ್ಮಿಷ್ಠೆ ಪುರುವಿನ ತಾಯಿ ಅಲ್ಲ ಎಂದು ಬದಲಾಯಿಸಿದ್ದಾರೆ. ಹಾಗೆ ಬದಲಾಯಿಸಿ ಅವಳ ದೇಹ ಸೌಷ್ಟವಕ್ಕೆ ಪ್ರಾಸಂಗಿಕವಾದ ಒತ್ತುಕೊಟ್ಟಿರುತ್ತಾರೆ. ಪುರುವಿನ ಹೆಂಡತಿ ಚಿತ್ರಲೇಖೆ ಮೂಲ ಕತೆಯಲ್ಲಿಲ್ಲ. ಪುರು ಚಿತ್ರಲೇಖೆಯರು ಪುರ ಪ್ರವೇಶ ಮಾಡುವಲ್ಲಿಂದ ತೊಡಗಿ, ಮುಂದೆ ನಡೆಯುವ ಕ್ರಿಯೆಗಳೆಲ್ಲವೂ ಕೆಲವೇ ಗಂಟೆಗಳ ಕಾಲವ್ಯಾಪ್ತಿಗೆ ಒಳಪಟ್ಟಿದೆ. ಇಡಿಯ ನಾಟಕದ ಬಹುಪಾಲು ಹೆಂಗಸರ ಮಾತುಗಳಿಂದಲೇ ತುಂಬಿದೆ. ದೇವಯಾನಿ-ಶರ್ಮಿಷ್ಠೆಯರ ಮಾತಿನಲ್ಲಿರುವ ದ್ವೇಷ, ಅಸೂಯೆ, ..., ಹೊಗಳಿಕೆಗಳೆಲ್ಲಾ ಪ್ರೀತಿ ಸಹಜವಾದುವುಗಳೇ. ಚಿತ್ರಲೇಖೆ ಮತ್ತು ಸ್ವರ್ಣಲತೆಯ ಮಾತುಗಳಲ್ಲಿ ಇಂದಿಗೂ ನರಳುತ್ತಿರುವ ಸ್ತ್ರೀಸಂಕಟದ ಧ್ವನಿ ಇದೆ.

ಇಂದ್ರಿಯ ಸುಖವನ್ನು ಹತ್ತಿಕ್ಕಲು ಸಾಧ್ಯವಿಲ್ಲದ ಯಯಾತಿ, ಶುಕ್ರಾಚಾರ್ಯರ ಶಾಪದಿಂದ ಒದಗಿ ಬರಬಲ್ಲ ಮುದಿತನವನ್ನು ಕಳೆದುಕೊಳ್ಳಲು ಪುರುವಿನೊಡನೆ ಸುಳ್ಳು ಹೇಳಲೂ ಹೇಸುವುದಿಲ್ಲ. ತಾನು ಚಂದ್ರವಂಶದ ಅರಸ ಎಂದು ಆಗಾಗ ಕೊಚ್ಚಿ ಕೊಳ್ಳಲೂ ನಾಚುವುದಿಲ್ಲ. ಇಲ್ಲಿ ಮಾನಸಿಕ ಹಿಂಸೆಗೆ ಒಳಗಾಗುವವ ಪುರು. ಯಯಾತಿಯನ್ನು ಹೆದರಿಸಿಯೇ ಮದುವೆಯಾದ ದೇವಯಾನಿ, ತನ್ನ ದೇಹದ ಮೂಲಕ ಅವನ ಪ್ರೀತಿಗೆ ಪಾತ್ರಳಾಗುವ ಶರ್ಮಿಷ್ಠೆ, ಮದುವೆಯ ಮೊದಲ ರಾತ್ರಿಯಲ್ಲಿಯೇ ತನ್ನ ಮುದಿ ಗಂಡನನ್ನು ಕಂಡು ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳುವ ಚಿತ್ರಲೇಖೆ - ಇವರೆಲ್ಲರ ದುಃಖದುಮ್ಮಾನಗಳ ತಿಕ್ಕಾಟದಲ್ಲಿಯೆ ನಾಟಕದ ಜೀವಾಳವಿದೆ.

ನಾಟಕದಲ್ಲಿ ಬರುವ ಕೆಲವೇ ಕೆಲವು ರಂಗಕ್ರಿಯೆಗಳೂ ಧ್ವನಿಪೂರ್ಣವಾಗಿವೆ. ಕಾರ್ನಾಡರು ಬಳಸುವ ಭಾಷೆಯಲ್ಲಿರುವ ರೂಪಕಗಳು ಪಾತ್ರಗಳ ತೀವ್ರವಾದ ದುಃಖವನ್ನು ಸಂವೇದನಾಶೀಲವನ್ನಾಗಿ ಮಾಡುತ್ತವೆ.

**ತುಘಲಕ್:** ಒಬ್ಬಾತನನ್ನು ಅದ್ಭುತ ನಟನಾಗಿ ಪರಿವರ್ತಿಸಬಲ್ಲ ಒಂದು ಪಾತ್ರ ದೇಶದ ಯಾವುದಾದರೂ ನಾಟಕದಲ್ಲಿ ಇರುವುದಾದರೆ ಅದು ತುಘಲಕನದ್ದು ಯಶಸ್ವಿ ತುಘಲಕ ಪಾತ್ರಧಾರಿ ನಟ, ಪ್ರಪಂಚದ ಯಾವ ನಾಟಕಗಳ ಯಾವ ಕ್ಲಿಷ್ಟ ಪಾತ್ರವನ್ನಾದರೂ ಸಮರ್ಥವಾಗಿ ನಿರ್ವಹಿಸಬಲ್ಲ.

ದಿಲ್ಲಿಯಲ್ಲಿ ಆಳಿದ ದೊರೆ ತುಘಲಕ್- ಈ ನಾಟಕದ ನಾಯಕ. ಆತ ಪ್ರಜೆಗಳನ್ನು ಪ್ರೀತಿಸುತ್ತಾನೆ, ದೇವರ ಪ್ರಾರ್ಥನೆ ಬೇಕೆನ್ನುತ್ತಾನೆ, ಒಳ್ಳೆಯ ರಾಜಕಾರಣಿ, ಕವಿ ಹೃದಯಿ ಮತ್ತು ಕ್ರೂರಿಯೂ ಹೌದು. ಹೃದಯಹೀನ ರಾಜಕಾರಣದ ನಡುವೆ ಕನಸು ಕಾಣುವ ಕವಿ ಹೃದಯ ಸಿಲುಕಿಬಿದ್ದರೆ ಉಂಟಾಗುವ ವಿಕೃತ ರೂಪವೇ ತುಘಲಕನದ್ದು ಎನ್ನಬಹುದು. ಹೋದ ಶತಮಾನದ ಆರನೆಯ ದಶಕದಲ್ಲಿ ಬರೆದಿರುವ ಈ ನಾಟಕ, ಅಂದು ನಮ್ಮನ್ನು ಆಳುತ್ತಿದ್ದ ರಾಜಕಾರಣಿಗಳ ಕನಸುಗಳನ್ನು, ಅವರ ಕ್ರಿಯೆಗಳ ಅರ್ಥ ಹೀನತೆಯನ್ನು ಧ್ವನಿಪೂರ್ಣವಾಗಿ ಚಿತ್ರಿಸುವುದೆಂದು ಹೆಚ್ಚಿನ ವಿಮರ್ಶಕರು ಹೇಳುತ್ತಾರೆ. ಆದರೆ ನಮ್ಮ ರಾಜಕಾರಣಿಗಳು ಕನಸುಗಾರರಾಗಿದ್ದರೂ ತುಘಲಕನ ಕವಿ ಹೃದಯ, ರಾಜಕಾರಣಿಯ ಒಳನೋಟ, ತರ್ಕಬದ್ಧ ನ್ಯಾಯಸ್ಥಾಪನೆಗಾಗಿ ಇರುವ ಕಾಳಜಿ, ದೈವಭಕ್ತಿ - ಅವರಲ್ಲಿ ಇರಲಿಲ್ಲ. ಚದುರಂಗದ ಎಲ್ಲಾ ಕಾರ್ಯಗಳ ನಡೆಯನ್ನು ತನ್ನೊಬ್ಬನಲ್ಲಿಯೆ ಹೇರಿಕೊಂಡು, ತುಘಲಕ್, ರಾಜಕಾರಣದಲ್ಲಿ ವೈಯಕ್ತಿಕ ಜೀವನದಲ್ಲಿ ಆಟ ಆಡುವುದು ಇಡಿಯ ನಾಟಕಕ್ಕೆ ಒಂದು ತರ್ಕಬದ್ಧ ನಡೆಯನ್ನು ಕೊಟ್ಟಿದೆ. 1964ರಲ್ಲಿ ಪ್ರಕಟಗೊಂಡ ಈ ನಾಟಕವನ್ನು ದೇಶದ ಪ್ರಸಿದ್ದ ನಿರ್ದೇಶಕರು ನಿರ್ದೇಶಿಸಿದ್ದಾರೆ; ಪ್ರಸಿದ್ಧ ನಟರು ತುಘಲಕನಾಗಿದ್ದಾರೆ; ದಿಲ್ಲಿಯ ಪುರಾನಾ ಖಿಲ್ಲದ ಹಿನ್ನೆಲೆಯಿಂದ ಹಿಡಿದು, ಹಳ್ಳಿಯ ಪ್ರೌಢಶಾಲೆಗಳಲ್ಲಿಯೂ ಇದನ್ನು ಅಭಿನಯಿಸುತ್ತಾರೆ. ಈ ನಾಟಕದ ಪ್ರದರ್ಶನ ವ್ಯಾಪ್ತಿ ಇಷ್ಟಿದೆ. ದೃಶ್ಯದಿಂದ ದೃಶ್ಯಕ್ಕೆ ಕ್ರಿಯೆ ಬಿಗಡಾಯಿಸುತ್ತಾ ಹೋಗುವ ಈ ನಾಟಕ ಒಂದು ಅಪೂರ್ವ ಕೃತಿ. ಚಾರಿತ್ರಿಕ ಮೂಲ ದ್ರವ್ಯವಿರುವ ಈ ನಾಟಕದಲ್ಲಿ ಗಿರೀಶರು ಚರಿತ್ರೆಯನ್ನು ಕಿಂಚಿತ್ತೂ ತಿರುಚುವುದಿಲ್ಲ; ಇದು ಸತ್ಯಶೋಧನೆಯ ಕ್ರಮ - ಆತ್ಮಶೋಧನೆಯ ಕ್ರಮವೂ ಹೌದು. ಗಿರೀಶರು ಈ ನಾಟಕದಲ್ಲಿ ಬಳಸಿರುವ ಭಾಷೆಗೆ ಕಾವ್ಯಗುಣ ಇದೆ. ಮಾತ್ರವಲ್ಲದೆ, ಮನಸ್ಸಿನ ಅತಿ ಆಳದಲ್ಲಿ ಕುಳಿತಿರಬಹುದಾದ ನೋವನ್ನು ಸ್ಪಟಿಕ ಗುಣದಿಂದ ಅಭಿವ್ಯಕ್ತಗೊಳಿಸುವ ಶಕ್ತಿಯೂ ಇದೆ.

ತುಘಲಕ ನಾಟಕದ ಗಾತ್ರಕ್ಕೆ ಹಯವದನ ಬರುವುದಿಲ್ಲ. ಆದರೂ ಇದು ಪ್ರಸಿದ್ಧ

ನಾಟಕ. ತುಘಲಕ ನಾಟಕದಲ್ಲಿ ಚಾರಿತ್ರಿಕ ವಸ್ತು ದ್ರವ್ಯವೇ ಮನುಷ್ಯ ವ್ಯಾಪಾರದ ವಿಮರ್ಶೆಯನ್ನು ಮಾಡುತ್ತದೆ. ತುಘಲಕದಲ್ಲಿ ಪಾತ್ರಗಳು ರೂಪುಗೊಳ್ಳುವಂತೆಯೆ ಚರಿತ್ರೆ ಸೃಷ್ಟಿಯಾಗುವುದಾದರೆ, ಹಯವದನದಲ್ಲಿ ಜಾನಪದ ಧಾಟಿಯೇ ಪಾತ್ರಗಳಿಗೆ ಜೀವಕೊಡುತ್ತದೆ.

**ಹಯವದನ:** ಕಪಿಲ-ದೇವದತ್ತ-ಪದ್ಮಿನಿ-ಇವರೊಳಗಿನ ಅವರ್ಣನೀಯ ಸೆಳೆತವೇ ಹಯವದನದ ಮೂಲದ್ರವ್ಯ. ಆದರೆ ಈ ಮೂಲದ್ರವ್ಯವೇ ಸೃಷ್ಟಿಸಿರುವ ಒಂದು ಸಮಸ್ಯೆಗೆ, ತನ್ನದೇ ಆದ ಒಂದು ಭಾವಾತ್ಮಕ ಉತ್ತರವನ್ನು ಕಾರ್ನಾಡರೇ ಸಿದ್ಧಮಾಡಿದ್ದರಿಂದ, ನಾಟಕದ ಕೊನೆಯಲ್ಲಿ ಈ ಮೂವರೂ ಪ್ರಾಣತ್ಯಾಗ ಮಾಡಿ, ಆ ಸಂಪೂರ್ಣತೆಯೆ ಸಂಪೂರ್ಣವಾಗಬಲ್ಲ ಒಳಹರಿವು ಇದೆ. ಭಾಗವತನ ಪಾತ್ರವಿದ್ದರೂ ಆತ ಯಕ್ಷಗಾನದ ಭಾಗವತ ಅಲ್ಲ. ಅಪೂರ್ಣವಾಗಿ ನಾಟಕದ ಮೊದಲಲ್ಲಿ ಬರುವ ಹಯವದನ, ನಾಟಕ ಮುಗಿಯುವ ವೇಳೆ ಪೂರ್ಣನಾಗುತ್ತಾನೆ. ಕಪಿಲ ದೇವದತ್ತ ಪದ್ಮಿನಿಯರು ತಮ್ಮ ತಮ್ಮ ಮೃತ್ಯುವಿನಿಂದ ತಮ್ಮ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಪೂರ್ಣರಾಗುತ್ತಾರೆ.

ಅಪೂರ್ಣನಾಗಿ ಕಾಣಿಸುವ ಗಣಪತಿಯ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುವ ನಾಟಕ, ಬದುಕು ಆಕರ್ಷಕವಾಗಿರುವುದು ಅದರಲ್ಲಿರುವ ಅಪೂರ್ಣತೆಯಿಂದಲೇ ಎಂಬ ಸಿದ್ಧಾಂತವನ್ನು ಮೈಗೂಡಿಸಿಕೊಂಡಿರುವ ಅದೇ ಗಣಪತಿ ಸ್ತುತಿಯೊಂದಿಗೆ ಮುಕ್ತಾಯವಾಗುತ್ತದೆ.

**ಅಂಜುಮಲ್ಲಿಗೆ:** ಕಾರ್ನಾಡರ ಮುಂದಿನ ನಾಟಕ 'ಅಂಜುಮಲ್ಲಿಗೆ' ಪ್ರದರ್ಶನಗೊಂಡದ್ದೇ ಅಪರೂಪ. ಇದಕ್ಕೆ ಎರಡು ಕಾರಣಗಳನ್ನು ಗುರುತಿಸಬಹುದು. ಒಂದು- ಈ ನಾಟಕ ಅಕ್ಕ ಮತ್ತು ತಮ್ಮನೊಳಗಿನ ಸಂಬಂಧದ ಕುರಿತಾದದ್ದು; ಎರಡು- ಇದರಲ್ಲಿ ನಾಲ್ಕು ಇಂಗ್ಲಿಷ್, ಜನರ ಪಾತ್ರಗಳಿವೆ. ಇದರ ಎಲ್ಲಾ ಪಾತ್ರಗಳು ಘಟನೆಗಳಿಗೆ ತೀವ್ರವಾದ ದೈಹಿಕ ಪ್ರತಿಕ್ರಿಯೆ ತೋರುವವರು. ಡೇವಿಡನ ಪಾತ್ರವಂತೂ ಬ್ರಿಟಿಷರ ವರ್ಣದ್ವೇಷ ಮನೋಧರ್ಮದ ಸಮರ್ಪಕವಾದ ಪ್ರತಿನಿಧಿಯಂತಿದೆ. ಈ ಪಾತ್ರವನ್ನು ಸೃಷ್ಟಿಸಿದ ಕಾರ್ನಾಡರ ಧೈರ್ಯವನ್ನು ಮೆಚ್ಚಲೇಬೇಕು. ಡೇವಿಡ್ ಯಾಮಿನಿಯನ್ನು ದೈಹಿಕವಾಗಿ ಆಕ್ರಮಿಸುತ್ತಾನೆ. ಮೈಕೆಂಡವಾಗಬಲ್ಲ ಮಿನಿಯ ಕಾಮವನ್ನು ತಣಿಸಲು ಅಂಥಾ ಕ್ರೂರ ಬಿಳಿಯನೇ ಬೇಕಾಗಬಹುದು - ಎಂಬ ಕಾರ್ನಾಡರ ವಾದ ಸರಿಯಾಗಿರಬಹುದು - ಎಂದು ನಾಟಕ ಓದುವಾಗ, ನೋಡುವಾಗ ನಮಗೆ ಅನಿಸಬಹುದು. ಯಾಮಿನಿಯ ತಮ್ಮ ಸತೀಶ ಇಂಗ್ಲೀಷ್ ಮಹಿಳೆ ಜ್ಯೂಲಿಯೊಂದಿಗೆ ಪ್ರೇಮವನ್ನು ಬೆಳೆಸಿಕೊಂಡಾತ. ಇವರೆಲ್ಲರ ಕ್ರಿಯೆಯ ಹಿಂದೆ ಮನೋವೈಜ್ಞಾನಿಕ ಕಾರಣಗಳಿವೆ. ಈ ನಾಟಕವನ್ನು ರಂಗದ ಮೇಲೆ ಕಂಡಾಗ ಪ್ರೇಕ್ಷಕರು ಯಾವ ಬಗೆಯ ಮನೋತಲ್ಲಣಕ್ಕೆ

ಒಳಗಾಗಬಲ್ಲದು ಎಂದು ಊಹಿಸುವುದೇ ಕಷ್ಟ. ಇದು ಕಾರ್ನಾಡರ ಏಕೈಕ ಸಾಮಾಜಿಕ ನಾಟಕ.

**ಹಿಟ್ಟಿನ ಹುಂಜ:** ಜೈನ ಪುರಾಣದಲ್ಲಿ ಬರುವ ಅಮೃತಮತಿ-ಮಾವುತರ ಕತೆಯನ್ನು ಆಧರಿಸಿ ಬರೆದ ನಾಟಕ 'ಹಿಟ್ಟಿನ ಹುಂಜ' ಒಬ್ಬ ಮಾವುತನ ಸಂಗೀತಕ್ಕೆ ಮರುಳಾಗಿ ಅವನೊಡನೆ ದೈಹಿಕ ಸಂಪರ್ಕ ಬೆಳೆಸಿ, ಅಂಥಾ ಸಂಬಂಧ ಪಾಪವಲ್ಲ ಎಂಬ ಸಿದ್ಧಾಂತಕ್ಕೆ ಅಂಟಿಕೊಂಡಿದ್ದವಳು ಅಮೃತಮತಿ. ಈ ಸೂತ್ರವನ್ನೇ ಅನುಸರಿಸಿ ಕನ್ನಡದ ಅತ್ಯುತ್ತಮ ಏಕಾಂಕಗಳಲ್ಲಿ ಒಂದಾಗಿರುವ 'ಹಿಟ್ಟಿನ ಹುಂಜ'ವನ್ನು ಕಾರ್ನಾಡರು ಬರೆದಿರುತ್ತಾರೆ. ಈ ನಾಟಕದಲ್ಲಿ ಬರುವ ರಾಜ-ರಾಣಿ-ರಾಜಮಾತೆ-ಮಾವುತ ಇವರೆಲ್ಲರೂ ಒಂದಲ್ಲ ಒಂದು ಬಗೆಯಿಂದ ನರಳುವವರೇ, ತನ್ನ ರಾಣಿ ಬಂಜೆ ಎಂಬ ಚಿಂತೆಯಿಂದಾಗಿ ರಾಜ ನರಳುತ್ತಾನೆ; ಸಂಗೀತಕ್ಕೆ ಮಾರುಹೋಗಿ ಗೂನುಬೆನ್ನಿನ ಮಾವುತನಿಗೆ ತನ್ನ ದೇಹವನ್ನು ಒಡ್ಡುವುದರಲ್ಲಿ ರಾಣಿ ನರಳುತ್ತಾಳೆ; ಕ್ಷತ್ರಿಯನಾಗಿದ್ದ ತನ್ನ ಮಗ ರಾಣಿಯ ದೆಸೆಯಿಂದ ಜೈನನಾಗಿರುವುದರಿಂದ ರಾಜಮಾತೆ ನರಳುತ್ತಾಳೆ; ತನ್ನ ಅದ್ಭುತ ಕಂಠದಿಂದ ಇದ್ದ ಬಿದ್ದ ಹೆಣ್ಣುಗಳನ್ನು ತನ್ನ ಬಳಿ ಸೆಳೆದುಕೊಳ್ಳಬಲ್ಲ ಹೆಮ್ಮೆಯಿಂದ ಮಾವುತ ನರಳುತ್ತಾನೆ. ಇಡಿಯ ನಾಟಕ ಮಾನಸಿಕ ನೋವಿನ ನರಳಾಟದಿಂದ ತುಂಬಿದೆ - ಆದರೆ ಈ ನರಳಾಟದಲ್ಲಿ ಮಾಧುರ್ಯವಿದೆ. ಹಾಳುಬಿದ್ದ ಬಸದಿಯ ಒಳಗೆ ಬತ್ತಲಾಗಿರುವ ಜಿನಮೂರ್ತಿಯ ಎದುರು ನಡೆಯುವ ಕ್ರಿಯೆಗಳಲ್ಲಿ,ನಾಲ್ಕೂ ಪಾತ್ರಗಳು ಮಾತಿನ ಮೂಲಕ ಬತ್ತಲಾಗುವುದು ಲೇಖಕನ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಇಡಿಯ ನಾಟಕವೆ ಒಂದು ದುರಂತಕಾವ್ಯ. ನೋವಿನಿಂದ ಮಡುಕಟ್ಟಿದ ಮಾತುಗಳೂ ಕಾವ್ಯ. ಕಾರ್ನಾಡರ ಈ ಚಿಕ್ಕಕೃತಿ ಕಾಲ-ದೇಶ-ಕ್ರಿಯೆಯ ಐಕ್ಯತೆಯನ್ನು ಸಮರ್ಥವಾಗಿ ಸಾಧಿಸಿದ ಕನ್ನಡದ ಏಕೈಕ ಕೃತಿ ಎಂದು ನಿಸ್ಸಂಕೋಚವಾಗಿ ಹೇಳಬಹುದು.

**ನಾಗಮಂಡಲ:** ಕವಿ ಹೃದಯದ ಕಾರ್ನಾಡರಿಗೆ ಜಾನಪದ ಕತೆಗಳು ಆಪ್ತವಾಗಿರುವುದರಿಂದ 'ನಾಗಮಂಡಲ' ನಾಟಕ ರೂಪುಗೊಂಡಿತು. ಗಂಡನೊಡನೆ ಯಾವ ದೈಹಿಕ ಸಂಬಂಧವೂ ಸಾಧ್ಯವಾಗದೆ, ಮಂತ್ರದ ಬೇರಿನ ಪರಿಣಾಮವಾಗಿ ಇನ್ನೊಬ್ಬನಿಂದ ಗರ್ಭಧರಿಸಿ, ಊರವರ ಎದುರಿಗೆ ನಾಗದಿವ್ಯ ಪರೀಕ್ಷೆಯಲ್ಲಿ ವಿಜಯಿಯಾಗಿ ಬರುವ ರಾಣಿ ನಾಟಕದ ಕೇಂದ್ರಶಕ್ತಿ. ಹಾವು ಕಾಮಕ್ಕೆ ಸಂಕೇತವಾಗಿರುವುದು ಹಳೆಯ ಮಾತಾಗಿದ್ದರೂ, ಈ ನಾಟಕದಲ್ಲಿ ಅದು ವ್ಯಕ್ತಿಯ ರೂಪತಾಳಿರುತ್ತದೆ. ಕಾಮ ಇಲ್ಲಿ ಉರಿಯುವುದಿಲ್ಲ, ಬದಲಾಗಿ ಪ್ರೇಮವಾಗಿದೆ. ನಾಟಕದ ಮೊದಲ ಭಾಗದಲ್ಲಿ ಬರುವ ನಾಟಕಕಾರ, ದೀಪಗಳು ಮನುಷ್ಯರೂಪದ ಕತೆ - ನಾಟಕದ ಅವಿಭಾಜ್ಯ ಅಂಗವಾಗಿ ಬಿಡುತ್ತಾರೆ. ಈ ನಾಟಕದಲ್ಲಿ ಘಟನೆಗಳು ತೀವ್ರಗತಿಯಿಂದ ಸಂಭವಿಸುವುದರಿಂದ ಇದರ ಎರಡನೆಯ ಭಾಗದಲ್ಲಷ್ಟೇ ಕವಿಹೃದಯದ ಕಾರ್ನಾಡರನ್ನು ಕಾಣಬಹುದು.

ರಾಣಿ ತಾನು ಗರ್ಭ ಧರಿಸಿದ್ದನ್ನು ನಾಗಪ್ಪನೊಡನೆ ಹೇಳುವ ಮಾತು, ನಾಗಪ್ಪ ಕೊನೆಯ ಬಾರಿ ರಾಣಿಯನ್ನು ಕಂಡಾಗ ಹೇಳುವ ಮಾತು - ಕಾರ್ನಾಡರ ಭಾವ ಶ್ರೀಮಂತಿಕೆಗೆ ಸಾಕ್ಷಿಯಾಗಿದೆ. ಒಂದು ಸಾಧಾರಣ ಜಾನಪದ ಕತೆಯನ್ನು ಆಧರಿಸಿ, ಅದಲು ಬದಲಾಗುವ ಕ್ರಿಯೆಯನ್ನು ಕೌತುಕದ್ರವ್ಯವನ್ನಾಗಿ ಮಾರ್ಪಡಿಸಿ, ಮಾನವ ಸಹಜವಾದ ಸಿಟ್ಟು, ಸಂಶಯ, ನೋವು, ಪ್ರೀತಿಗಳನ್ನು ಅನ್ವೇಷಣೆಗೆ ಒಡ್ಡುವ ಕಾರ್ನಾಡರ ಚಾಕಚಕ್ಯತೆ ನಾಗಮಂಡಲದಲ್ಲಿ ಹೆಪ್ಪುಗಟ್ಟಿನಿಂತಿದೆ.

**ತಲೆದಂಡ:** 'ಹಯವದನ'ದಿಂದ 'ನಾಗಮಂಡಲ'ದ ತನಕದ ಗಿರೀಶರ ನಾಟಕಗಳಲ್ಲಿ ಒಂದು ಬಗೆಯ ಸಂಕೀರ್ಣಶಿಲ್ಪವಿದೆ; ಸ್ವಪ್ನ ಚಿತ್ರಾವಳಿಯ ವಿನ್ಯಾಸವಿದೆ. ಆದರೆ 'ತಲೆದಂಡ'ದಲ್ಲಿ ಅದು ಕಾಣಿಸುವುದಿಲ್ಲ. ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಸಂಭವಿಸಿದ ಸಾಮಾಜಿಕ ಏರುಪೇರಿಗೆ ಸಂಕೀರ್ಣಶಿಲ್ಪವನ್ನು ಬಳಸಿ ವಿಶ್ಲೇಷಿಸಲು ಕಾರ್ನಾಡರು ಇಲ್ಲಿ ಪ್ರಯತ್ನಿಸುವುದಿಲ್ಲ. ಬದಲಾಗಿ ಇಡಿಯ ನಾಟಕದ ದೃಶ್ಯ ವಿಭಜನೆ ಚರಿತ್ರೆಯನ್ನು ಚಾಚೂ ತಪ್ಪದಂತೆ ಅನುಸರಿಸಿದೆ. ಬಿಜ್ಜಳ-ಬಸವಣ್ಣನವರ ಪಾತ್ರಗಳನ್ನು ಕನ್ನಡದ ಇತರ ನಾಟಕಕಾರರು ಕಾದಂಬರಿಕಾರರು ಬಳಸಿಕೊಂಡು ಕೃತಿ ರಚನೆ ಮಾಡಿದ್ದರೂ, ಕಾರ್ನಾಡರ ನಾಟಕದಲ್ಲಿ ಈ ಪಾತ್ರಗಳು ಉಸಿರಾಡಿದಂತೆ ಇನ್ನಾವ ಕೃತಿಯಲ್ಲಿಯೂ ಉಸಿರಾಡಿಲ್ಲ ಎಂದು ಹೇಳಬಹುದು. ಹಾಗೆಯೇ ಇಲ್ಲಿ ಬಳಸಿರುವ ಗ್ರಾಮ್ಯವಾಗಿ ಕೇಳಿಸುವ ಕನ್ನಡ ಭಾಷೆಗೆ ಎಂಥಾ ಕಸುವು ಇದೆ - ಅದರಲ್ಲಿ ಎಂಥಾ ಶಬ್ದ ಸಂಪತ್ತು ಇದೆ - ಎಂದು ನಮಗೆ ಮೊದಲಾಗಿ ತೋರಿಸಿದವರು ಕಾರ್ನಾಡರೇ ಎಂದರೆ ತಪ್ಪಾಗಲಾರದು.

ಬಿಜ್ಜಳನಿಗೆ ಪವಾಡವಾಗಿ, ಬಸವಣ್ಣನಿಗೆ ಕ್ರಾಂತಿಯಾಗಿ ಕಂಡುಬಂದ ಬ್ರಾಹ್ಮಣ ಹುಡುಗಿ ಮಾದಿಗ ಹುಡುಗನ ವಿವಾಹದ ಪರಿಣಾಮವಾಗಿ, ಹದಿನೆರಡನೆಯ ಶತಮಾನದಲ್ಲಿಯೆ ಪಟ್ಟಭದ್ರ ಹಿತಾಸಕ್ತಿಗಳು ಯಾವ ಬಗೆಯ ಕೆಲಸ ಮಾಡಿದವು. ಇದರಿಂದಾಗಿ ಬಿಜ್ಜಳ ಹೇಗೆ ಪ್ರಾಣಾರ್ಪಣೆ ಮಾಡಬೇಕಾಯಿತು - ಎಂಬುದನ್ನು ಎಳೆ ಎಳೆಯಾಗಿ ಬಿಡಿಸಿ, ಆ ಕಾಲದ ಮನುಷ್ಯ ಚರಿತ್ರೆಯನ್ನು ನಮ್ಮ ಕಾಲದಲ್ಲಿಯೂ ಸಂಭವಿಸುವಂತೆ ಮಾಡಿದ ಕಾರ್ನಾಡರಿಗೆ ಕನ್ನಡ ರಂಗಭೂಮಿ ಯಾವತ್ತೂ ಋಣಿಯಾಗಿರಬೇಕು.

ಚಾರಿತ್ರಿಕ ನಾಟಕಗಳ ರಚನೆಯಲ್ಲಿ ಚರಿತ್ರೆಗೆ ಬಹಳಷ್ಟು ನಿಷ್ಠರಾಗಿರುವ ಕಾರ್ನಾಡರು, ಪೌರಾಣಿಕ ನಾಟಕಗಳನ್ನು ರಚಿಸುವಾಗ ಮೂಲಕತೆಯನ್ನು ಸಾಕಷ್ಟು ಬದಲು ಮಾಡುವುದು ಕುತೂಹಲಕಾರಿಯಾಗಿದೆ. ಚರಿತ್ರೆಯನ್ನು ಪ್ರಶ್ನಿಸಬಹುದು. ಆದರೆ ಪುರಾಣಗಳನ್ನಲ್ಲ; ಅಥವಾ ಚರಿತ್ರೆಗೆ ಖಚಿತವಾದ ಅರ್ಥವಿರುತ್ತದೆ - ಪುರಾಣಗಳಿಗೆ ಹಲವು ಅರ್ಥಗಳು ಸಾಧ್ಯವಾಗಬಹುದು - ಎಂಬ ಧೋರಣೆಯು ನಾಟಕಕಾರರಿಗೆ ಈ ಬಗೆಯ ಸ್ವಾತಂತ್ರ್ಯ ಕೊಟ್ಟಿರಬಹುದು.

**ಅಗ್ನಿ ಮತ್ತು ಮಳೆ:** 'ಅಗ್ನಿ ಮತ್ತು ಮಳೆ' ಎಂಬ ಪೌರಾಣಿಕ ನಾಟಕದಲ್ಲಿ, ಪುರಾಣಕತೆಯ ಎಳೆ ಇದ್ದರೂ, ಬೆಳವಣಿಗೆಯಲ್ಲಿ ಅದು ತನ್ನದೇ ಆದ ರೂಪು ತಳೆದಿದೆ. ಒಂದೆಡೆ ರೈಭ್ಯ ಋಷಿಯ ಮಕ್ಕಳಾದ ಅರವಸು ಮತ್ತು ಪರವಸು - ಮತ್ತೊಂದೆಡೆ ಭಾರದ್ವಾಜ ಮತ್ತು ಅವನ ಮಗನಾದ ಯವಕ್ರೀತ - ಹೀಗೆ ಐದು ಪಾತ್ರಗಳೊಳಗೆ ತಿಕ್ಕಾಟ ಮೂಲಕತೆಯಲ್ಲಿದೆ. ಕಾರ್ನಾಡರ ನಾಟಕದಲ್ಲಿ ಇದೇ ಘರ್ಷಣೆ ಇದ್ದರೂ, ಇದಕ್ಕೆ ಹಲವಾರು ಒಳಸುಳಿಗಳು ಸೇರಿಕೊಂಡು ನಾಟಕ ಸಂಕೀರ್ಣವಾಗಿದೆ. ಇಲ್ಲಿ ಬರುವ ಸ್ತ್ರೀ ಪಾತ್ರಗಳ ಹೆಸರು ಪುರಾಣದಲ್ಲಿ ಕಾಣಿಸುವುದಿಲ್ಲ. ಆದರೆ ಪರವಸುವಿನ ಹೆಂಡತಿಯನ್ನು ಯವಕ್ರೀತ ಬಲಾತ್ಕಾರ ಮಾಡಿ ಸಂಭೋಗಿಸುತ್ತಾನೆ; ಇದರಿಂದ ರೈಭ್ಯ ಸಿಟ್ಟುಗೊಂಡು ಒಂದು ಕೃತ್ಯವನ್ನು ನಿರ್ಮಿಸಿ ಯವಕ್ರೀತನನ್ನು ಕೊಲ್ಲುತ್ತಾನೆ.

ಈ ಕೊಲೆಯ ಪರಿಣಾಮವಾಗಿ ಯವಕ್ರೀತನ ತಂದೆ ಭಾರದ್ವಾಜ ರೈಭ್ಯನನ್ನು ಶಪಿಸುತ್ತಾನೆ. ಈ ಶಾಪದ ಫಲವಾಗಿ ರೈಭ್ಯ ತನ್ನ ಮಗ ಪರವಸುವಿನಿಂದಲೇ ಕೊಲ್ಲಲ್ಪಡುತ್ತಾನೆ. ಹೀಗೆ ಸತ್ತವರೆಲ್ಲರನ್ನೂ ಅರವಸು ಸೂರ್ಯದೇವನ ನೆರವಿನಿಂದ ಬದುಕಿಸುತ್ತಾನೆ - ಎಂಬ ಮೂಲ ಕತೆಯಲ್ಲಿ ಕಾರ್ನಾಡರು ಮಾಡಿರುವ ಮುಖ್ಯ ಬದಲಾವಣೆ ಎಂದರೆ - ಅರವಸು ಇವರನ್ನೆಲ್ಲಾ ಬದುಕಿಸುವ ಬದಲು ರೈಭ್ಯ ಋಷಿಯಿಂದ ಸೃಷ್ಟಿಗೊಂಡ ರಾಕ್ಷಸನನ್ನು ಅವನ ರಾಕ್ಷಸತ್ವದಿಂದ ಬಿಡುಗಡೆಗೊಳಿಸುವುದು. ಈ ರೀತಿಯ ಬದಲಾವಣೆಗೆ ಅವರು ಕೊಡುವ ತಾರ್ಕಿಕ ವಿವರಣೆ ಅವರ ಪ್ರತಿಭೆಗೆ ಸಾಕ್ಷಿಯಾಗಿದೆ; ಅದೇನೆಂದರೆ ಕಾಲವನ್ನು ಹಿಂತಿರುಗಿಸಲು ಆಗುವುದಿಲ್ಲ, ಆದರೆ ಮುಂದಾಗುವುದನ್ನು ನಿಲ್ಲಿಸಬಹುದು - ಎಂದು. ಈ ನಾಟಕದಲ್ಲಿ ಕಾರ್ನಾಡರು ಬಳಸಿದ ಭಾಷೆಗೆ ಪೌರಾಣಿಕ ವಾಸನೆ ಇದೆ. 'ತಲೆದಂಡ'ದಲ್ಲಿ ಶುದ್ಧ ಪ್ರಾದೇಶಿಕ ಕನ್ನಡವನ್ನು ಬಳಸಿಕೊಂಡಿದ್ದ ಕಾರ್ನಾಡರೇ, ವೈದಿಕ ಯುಗವನ್ನು ಮೈಗೂಡಿಸಿಕೊಂಡಿರುವ ಕನ್ನಡದಲ್ಲಿ ಈ ಕೃತಿರಚನೆ ಮಾಡಿದರೇ ಎಂಬುದು ಬೆರಳು ಕಚ್ಚುವ ವಿಚಾರವಾಗಿದೆ.

'ಅಂಜುಮಲ್ಲಿಗೆ' ಹೊರತಾಗಿ ಕಾರ್ನಾಡರ ನಾಟಕಗಳು ಇಂದಿಗೂ ಪ್ರದರ್ಶಿಸಲ್ಪಡುತ್ತವೆ. ಇದರರ್ಥ - ನಮ್ಮ ದೇಶದ ರಂಗಭೂಮಿಯಲ್ಲಿ ಹೋದ ಶತಮಾನದ ಅರವತ್ತರ ದಶಕದಲ್ಲಿ ಕಾಣಿಸಿಕೊಂಡ ಒಂದು ವಿಸ್ಮಯವೆಂದರೆ ಗಿರೀಶ ಕಾರ್ನಾಡರು ನಾಟಕಕಾರರಾಗಿ ರೂಪುಗೊಂಡು ದೇಶದ ರಂಗಭೂಮಿಗೆ ಹೊಸ ಚಿಂತನೆಯ ಹೊಸ ದೃಶ್ಯ ಶ್ರೀಮಂತಿಕೆಯ ಆಯಾಮವನ್ನು ಒದಗಿಸಿಕೊಟ್ಟದ್ದು. ಇದು ಉತ್ಪ್ರೇಕ್ಷೆಯ ಮಾತಲ್ಲ ಎಂದು ದೇಶದ ರಂಗಾಸಕ್ತರಿಗೂ ರಂಗಕರ್ಮಿಗಳಿಗೂ ಚೆನ್ನಾಗಿ ತಿಳಿದಿದೆ. ✣

ವಿ.ಸೂ.: ಇತ್ತೀಚೆಗೆ ಕಾರ್ನಾಡರು 'ಬಿಂಬ' ಎಂಬಸಾಮಾಜಿಕ ನಾಟಕವನ್ನು ರಚಿಸಿ, ತಾನೂ ಸಮರ್ಥ ಸಾಮಾಜಿಕ ನಾಟಕಕಾರ ಆಗಲು ಸಾಧ್ಯ - ಎಂಬುದನ್ನು ಸಿದ್ಧ ಗೊಳಿಸಿದ್ದಾರೆ.

ಸಣ್ಣಕತೆ

# ಚದುರಂಗ

**-ಆರ್.ಆರ್. ಪಾಂಗಾಳ್**

"ಬೇವಾರ್ಸಿ ಹಲ್ಕಾ ನನ್ಮಕ್ಕಳ್ರು. ಇಪ್ರಿಂದ್ಲೇ ಎಲ್ಲಾ ಹಾಳಾಗಿ ಹೋಗಿರೋದು. ನಮ್ಮಂತೋವ್ರಿಗೆ ಈ ಭೂಮಿ ಮೇಲೆ ಬದ್ಕೋದೂ ಕಷ್ಟ" ಹಣೆಯ ಮೇಲಿನ ಬೆವರು ಒರಸಿಕೊಳ್ಳುತ್ತಾ ಬಂದ ನಿರಂಜನನನ್ನು ಕಂಡಾಗಲೇ ಅಂದ್ಕೊಂಡೆ. 'ಈ ಆಸಾಮಿ ಇವತ್ತು ಎಲ್ಲೋ ಏಟು ತಿದ್ಕೊಂಡು ಬಂದಿದೆ' ಅಂತ. ಇವತ್ತು ಸಂಕ್ರಾಂತಿ ಹಾಗೆಯೇ ರಂಜಾನ್ ಕೂಡ. ಮನೆಯಲ್ಲಿ ಕೂತು ಮಾಡೋದಾದ್ರೂ ಏನು ಅಂತ ಕ್ಲಿನಿಕಿಗೆ ಬಂದಿದೆ. ಸಾಬರೂ ಇಲ್ಲ. ಸಾಹೇಬರೂ ಇಲ್ಲ. ಹಬ್ಬ ಅಂದಾಗ ರೋಗಗಳೂ ದೂರ ಓಡುತ್ತವೋ ಏನೋ ! ಬಂದಾಗಿದೆ, ಹೇಗೂ ಒಂಬತ್ತು ಗಂಟೆಯ ತನಕ ಸಮಯ ತಳ್ಳಬೇಕು.

"ಯಾರ್ಮೇಲಪ್ಪಾ ನಿನ್ನ ಕೋಪಾ ?"

"ಅದೇ ಇನ್ನ್ಯಾರು ಆ ಬೇವಾರ್ಸಿಗಳು...."

"ಹೋಗ್ಲಿ ಆ ಬೇವಾರ್ಸಿ ಅನ್ನೋ ಶಬ್ದದ ಅರ್ಥನಾದ್ರೂ ಗೊತ್ತಾ ?"

"ಲೋ, ಪಂಡಿತ ಶಿಖಾಮಣಿ, ನಿನ್ನ ಪುರಾಣಾನ್ನ ಅಲ್ಲ, ಡಿಕ್ಷನರಿ ಕಂತೆ ಬಿಚ್ಬೇಡ."

"ಬೇವಾರ್ಸಿ ಅಂದ್ರೆ ಪಾರ್ಸಿ ಭಾಷೆಯಲ್ಲಿ ಬೇ ವಾರಸ್ ಅಂದ್ರೆ ವಾರಸುದಾರರು ಇಲ್ದೇ ಇರೋವ್ರೂಂತಾ."

"ದಯವಿಟ್ಟು ಕೊರಿಯೋದನ್ನು ನಿಲ್ಲಿಸ್ತೀಯಾ. ನಿನ್ಗೆ ಕೈ ಮುಗೀತೀನಿ. ತಲೆ ಕೆಡಿಸ್ಕೊಂಡು ಇಲ್ಲಿ ಬಂದ್ರೆ ಪ್ರಾಣ ಹಿಂಡೋಕ್ಕೆ ಸುರು ಮಾಡಿದ್ಯಲ್ಲೋ"

"ಹೋಗ್ಲಿ ಬಿಡು. ಕೋಪನಾದ್ರೂ ಯಾರ್ಮೇಲೆ ಅಂತ ಹೇಳು ?"

"ಆ ನಾರ್ತ್ ಇಂಡಿಯನ್ಸ್, ಮಲೆಯಾಳೀಸು, ಕೊಂಗರು, ಹೈದರಾಬಾದನೋವ್ರು, ಬಾಂಬೆಯವ್ರು..."

"ಅಂದ್ರೆ ನಿನ್ನ ನನ್ನಾ ಬಿಟ್ಟು ಪೂರ ಭಾರತದವ್ರ ಮೇಲಾ ನಿನ್ನ ಸಿಟ್ಟು ?"

"ಏನಯ್ಯ, ಏನನ್ಯಾಯ ಒಂದು ಟ್ವೆಂಟಿ ಥರ್ಟಿ ಸೈಟಿಗೆ ಹತ್ತು ಹದಿನೈದು ಲಕ್ಷ

ಅಂತಾರಲ್ಲ. ಒಂದಿಷ್ಟು ಲಂಗೋಟಯಷ್ಟು ಜಾಗಕ್ಕೆ ಇಷ್ಟು ಬೆಲೆ ತೆತ್ರೆ ಮನೆ ಕಟ್ಕೋದಾದ್ರೂ ಹ್ಯಾಗೆ ? ಬಾಳೋದಾದ್ರೂ ಹ್ಯಾಗೆ ?''

''ಲಂಗೋಟಿ ಉಟ್ಕೊಂಡು ಆ ಜಾಗದಲ್ಲಿ ಅಲಿಯೋದು...''

''ರಿಜಿಸ್ಟ್ರೇಷನ್ ಹದಿನೈದು ಪರ್ಸೆಂಟು, ಎರಡು ಪರ್ಸೆಂಟು ಬ್ರೋಕರ್ ಸೂಳೇಮಕ್ಕಿಗೆ, ಎರಡು ಪರ್ಸೆಂಟು ಲಾಯರ್ ಪಿಂಡಕ್ಕೆ, ದೊಡ್ಡ ರಣಹದ್ದು ಸಬ್ ರಿಜಿಸ್ಟ್ರಾರಿಗೆ ಇನ್ನೆರಡು ಪರ್ಸೆಂಟು, ಹೆಬ್ಬೆಟ್ಟು ಒತ್ತೋವ್ನಿಗೂ ಬೇರೆ. ಖಾತಾ, ಮಣ್ಣು ಮಸೀಂತಾ...''

''ಅದೆಲ್ಲ ಈಗಿನ ಫ್ಯಾಶನ್ನು ಕಣಮ್ಮಾ. ನೀನೆಲ್ಲೋ ಹಳೇ ಕಾಲದ ಗುಗ್ಗು, ಔಟ್ ಡೇಟೆಡ್ ಫೆಲೋ.''

''ಅದಕ್ಕೇ ಈ ಸೈಟು ಕೊಂಡ್ಕೊಂಡು ಗೋರಿ ಕಟ್ಟಿಸ್ಕೋಬೇಕು.''

''ಯಾಕೆ ? ಸೈಟು ಕೊಂಡ್ಕೊಂಡ್ಯಾ ?''

''ಹೂಂ ಕಣೋ. ಆ ಹಲ್ಕಾ ಬೇವಾರ್ಸಿಗಳು ಬೆಂಗ್ಳೂರ್ಗೆ ಬರ್ದೇ ಹೋಗಿದ್ರೆ ಎಲ್ಲಿ ಇಷ್ಟೊಂದು ಬೆಲೆ ಜಾಸ್ತಿ ಆಗ್ತಿತ್ತು ?''

''ಈಗ ತಿಳೀತು. ನಿನ್ನ ಕೋಪ ಯಾಕೆ ಅಂತಾ. ಅವ್ರು ಒಂದ್ವೇಳೆ ಇಲ್ಲಿಗೆ ಬರದೇ ಇದ್ರೆ...''

''ಅಲ್ಲಿಗೇ ಆಗ್ಹೋಯ್ತು ಅಂತ್ಯಾ. ಪ್ಲಾನು ಸ್ಯಾಂಕ್ಷನ್ಗೆ ಪೀಸು ಹದಿನೈದು ಸಾವ್ರ, ಅವನ ಲಂಚ ಹದಿನೈದು. ಆ ಸ್ಯಾಕ್ಷನ್ಡ್ ಪ್ಲಾನು ಪ್ರಕಾರ ಮುಂದೆ ಹತ್ತು ಹಿಂದೆ ಹತ್ತು ಆಚೆ ಹತ್ತು ಈಚೆ ಹತ್ತು ಬಿಟ್ರೆ ನಡುನಲ್ಲಿ ಒಂದು ಗೋರಿ ಮಾತ್ರಾ ಕಟ್ಕೋಕಾಗೋದು. ಕೇಳಿದ್ರೆ ... ಅಂತಾನೆ ಅದಿಲ್ದೆ ಕಟ್ಕೋಕಾಗುತ್ತಾ. ಕಾಂಪೌಂಡು ದಾಟಿ ರೋಡಲ್ಲೇ ಕಟ್ಟಿರೋವ್ರು, ಇಲ್ವಾ? ಸೂಳೇಮಕ್ಳು ಬರೋದು ಲಂಚ ಕೇಳೋಕೆ, ಅವರಿಗೊಂದು ಹದಿನೈದು ಇಪ್ಪತ್ತು. ಕೆ.ಇ.ಬಿ. ಸೂಯೇಜ್, ವಾಟರು.... ''

''ಅದೆಲ್ಲಾ ಆ ಮೇಲೆ ತಾನೇ ಇನ್ನು ರಿಜಿಸ್ಟ್ರೇಶನ್ನೇ ಆಗಿಲ್ಲ ಯಾಕೆ ಯೋಚ್ನೆ ?....''

''ಆರ್ಕಿಟೆಕ್ಟು, ಸ್ಟ್ರಕ್ಚರಲ್ಲು, ಸಿವಿಲ್ಲು, ಕಂಟ್ರಾಕ್ಟರು....'' ಹೊರಗಿನಿಂದ ಬಾಗಿಲುತಳ್ಳಿ ನನ್ನ ಅಸಿಸ್ಟೆಂಟು ಗೋಪಿ,

''ಸಾರ್, ಯಾರೋ ಪೇಷಂಟು ಬಂದಿದ್ದಾರೆ. ಆಗ್ಲೇ ಬಂದ್ರು ಎಷ್ಟು ಹೊತ್ತೂಂತಾ ಗೊಣಗ್ತಾ ಇದ್ದಾರೆ.''

''ಕಳ್ಸು''

''ನೀನು ಪೇಷಂಟ್ ನೋಡ್ತಿರು. ಒಬ್ರೇ ತಾನೇ, ನಾನು ಒಂದು ಸಿಗರೇಟು ಸೇದ್ಕೊಂಡು ಬರ್ತೀನಿ.''

''ನೋಡಪ್ಪ ಮಹಾರಾಯ ನೀನು ಸ್ಕೈಟು, ಜೆಲ್ಲಿಂಗ್ ಬಗ್ಗೆ ಮಾತಾಡೋ ಹಾಗಿದ್ರೆ ಬರ್ಬೇಡಾ'' ಅಷ್ಟು ಹೊತ್ತಿನಲ್ಲಿ ಅವನು ಹೋಗಿಯಾಗಿತ್ತು.

ಒಳಗೆ ಬಂದ ಪೇಷಂಟು ''ಏನ್ಸಾಹಬ್, ಎಷ್ಟು ಹೊತ್ತು ಆ ಮನ್ಸಾಗೆ, ನಮ್ಮ ಜಮಾನ ಗೊತ್ತಿಲ್ಲಾ ನಿಮ್ಗ.''

''ಏನು ತೊಂದ್ರೆ ನಿಮ್ಗೆ ?''

''ತಕ್ಲೀಫು ಏನೂ ಇಲ್ಲ. ... ಮಾತಾಡ್ಬೇಕು.''

''ನೀವೂ ಅವರತರ ಮಾತಾಡೋಕೆ ಬಂದಿರೋದಾ ?''

''ವಸಿ ಅಸ್ಟೇ''

''ಏನು ಹೇಳಿ''

''ನಿಮ್ಗ ನೋಡಿ ಬೇಜಾನು ದಿನ ಆಗೈತೆ ಡಾಕ್ಟ್ರೆ. ನಂದು ಹೆಸರು ಜ್ಞಾಪ್ಕಾ ಐತಾ ಡಾಕ್ಟ್ರೆ ?'' ಅವನ ಕೈಯಲ್ಲಿರುವ ಕವರಿನ ಮೇಲೆ ಆಗಲೇ ಕಣ್ಣಾಡಿಸಿದ ನನಗೆ ಅದರಲ್ಲಿ ಅವನ ಹೆಸರು ಕಂಡಿತ್ತು. ಹಲವು ವರ್ಷಗಳಿಂದ ಕಂಡ ಮುಖ. ಆದರೂ ಹೆಸರು ನೆನಪಲ್ಲಿ ಉಳಿದೀತೇ? ಅದರಲ್ಲಿ ಸೈಯದ್ ಅಶ್ರಫ್ ಎಂದಿತ್ತು.

''ಸೈಯದ್ ಅಶ್ರಫ್.''

''ಪರವಾಯಿಲ್ಲ ಡಾಕ್ಟ್ರೇ ನಿಮ್ಗ ಜ್ಞಾಪ್ಕಾ ಎಸ್ಟು ಚೆನ್ನಾಗಿ ಐತೆ.''

''ನಿಮ್ಮ ಕತೆ ಹೇಳಿ''

''ನಾನು ಸೌದಿ ಅರಬ್‌ದಿಂದ ಬಂದು ಒಂದು ತಿಂಗ್ಳು ಆಯ್ತು. ನಾನು ಬರ್ಬಾದ್ ಆದೆ. ಅರವತ್ತು ಸಾವ್ರ ಲುಕ್ಸಾನು ಆಯ್ತು.''

''ಅಶ್ರಫ್, ಸೌದಿಗೆ ಹೋದವ್ರು ಎಲ್ಲಾ ಕಾಸು ಮಾಡ್ಕೊಂಡು ಬರ್ತಾರೆ. ನೀವು ಹ್ಯಾಗೆ ಬರಬಾದು?''

''ನಾನು ಅವ್ರ ಮ್ಯಾಲೆ ಕಂಪ್ಲೇಂಟು ಮಾಡ್ಬೇಕು.''

''ಪೊಲೀಸ್ ಸ್ಟೇಷನ್‌ಗೆ ಹೋಗಿ ಇಲ್ಲಾ ಲಾಯರ್ ಇದ್ದಲ್ಲಿಗೆ. ನನಗೆ ಕಂಪ್ಲೆಂಟ್ ಬರಿಯೋಕೆ ಬರೋಲ್ಲ. ತಗೋಳಕ್ಕೂ ಬರಲ್ಲ. ನಿಮ್ಮ ದೇಹದ ಬಗ್ಗೆ ಕಂಪ್ಲೆಂಟು ಇದ್ರೆ ಹೇಳಿ. ಕೇಳಕ್ಕೆ ಬರುತ್ತೆ. ಔಷಧಿ ಕೊಡೋದಕ್ಕೂ ಬರುತ್ತೆ.''

''ನಮ್ದುಕ್ಕೆ ಮೋಸ ದಗಾ ಮಾಡ್ಬಿಟ್ರು.''

''ನಾನೇನು ಮಾಡ್ಲಿ ಹೇಳಿ.''

''ನಹೀಂ ಸಾಬ್, ನನ್ನ ಬಾತ್ ಸುನೋ. ಬಾಂಬೇ ತಾವ ಯೋಕರು ಕೆಲ್ಸ ಕೊಟ್ಟು ಪಾಸ್‌ಪೋರ್ಟ್ ವೀಸಾ ಕೊಡ್ತು''

''ಎಷ್ಟು ಕಾಸು ಕೊಟ್ಟೆ ಅವ್ನಿಗೆ ?''

''ಹತ್ತು ಸಾವ್ರ''

''ಅವ್ನು ತಿಂದು ಹಾಕಿದ್ನಾ''

''ಇಲ್ಲ ಸಾಬ್. ಇಲ್ಲಿ ಬಾಂಬೆನಾಗೆ ಮೆಡಿಕಲ್ ಮಾಡಿ ಪಾಸ್ ಮಾಡಿದ್ರು. ಅರಬ್‌ಗೆ ಹೋದೆ ಕೆಲ್ಸ ಸಿಕ್ತು.''

''ಏನು ಕೆಲ್ಸ''

ಅವನು ತಲೆ ಕೆಳಗಾಗಿ ''ನಾನು ಎಲೆಕ್ಟ್ರಿಕಲ್ ಡಿಪ್ಲೊಮಾ ಸಾಬ್. ಸೂಪರ್‌ವೈಸರ್ ಕೆಲ್ಸ ಕೊಡ್ತೀನಿ ಅಂದ್ರು. ಅಲ್ಲಿ ಮಣ್ಣು ಅಗಿಯೋ ಕೂಲಿಕೆಲ್ಸ. ಹತ್ತು ಸಾವ್ರ ಅಂದ್ರು. ಐದು ಸಾವ್ರ ಕೊಟ್ರು. ಇರೋಕೆ ಮನೆ ಅಂದ್ರು,ಇಪ್ಪತ್ತು ಜನಾಗೆ ಅದು ಊಂಟ್ ಐತಲ್ಲಾ ಅದ್ರದ್ದು ಮನೆ....''

''ಅಂದ್ರೆ? ಓ ಒಂಟೆ ಲಾಯ....''

''ಹೌದು ಸಾಬ್. ಹಪ್ತೆಯಲ್ಲಿ ಒಂದು ದಿನ ಅಂದ್ರೆ ಜುಮ್ಮೆ ಹೊರಗೆ ಹೋಗೋದು. ಅದೂ ಅವ್ರ ಜನ ನಮ್ಜೊತೆ.''

''ಹೋಗೋ ಮೊದ್ಲು ಇದೆಲ್ಲಾ ಗೊತ್ತಿರ್ಲಿಲ್ವಾ ? ನಿಮ್ಜನಯಾರೂ ಇದನ್ನು ಹೇಳಿರ್ಲಿಲ್ವಾ ?''

''ಇಲ್ಲಾ ಸಾಬ್. ಬಡಾ ದೋಖಾ ಮಾಡಿದ್ರು ಸಾಬ್....''

ಹೊರಗಿನಿಂದ ಗೋಪಿ ಬಾಗಿಲು ಅರ್ಧ ತಳ್ಳಿ ''ಸಾರ್, ನಿಮ್ಮ ಸ್ನೇಹಿತ ಆಗ್ಲೇ ಬಂದಿದ್ರಲ್ಲಾ ಕೂತ್ಕಂಡವ್ರೆ, ಎಷ್ಟು ಹೊತ್ತೂಂತ ರೇಗ್ತಾ ಅವ್ರೆ. ಎರಡು ಸಿಗ್ರೇಟು ಸೇದಿದ್ರು.''

''ಸರಿ. ಅವ್ರನ್ನ ಒಳಕಳ್ಸು'' ಎಂದು ಗೋಪಿಗೆ ಅಂದು ಬಳಿಕ,

''ರೀ ಅಶ್ರಫ್, ನಿಮ್ಗೆ ಇವತ್ತು ಉಪವಾಸ ಇಲ್ವಾ ?''

''ಐತಲ್ಲಾ ಡಾಕ್ಟ್ರೆ, ಸೆಹ್ರಿಗೆ ಟೀಮಾಯ್ತು.''

ಒಳಬಂದ ನಿರಂಜನ ಮುಂದಿನ ಕುರ್ಚಿಯಲ್ಲಿ ಕುಳಿತು 'ಆಗ ಬಂದು ಎಷ್ಟು ಹೊತ್ತು ಮಾತನಾಡೋದು ಅಂದ ಮನುಷ್ಯ ಇವನೇ ತಾನೆ' ಎನ್ನುವಂತೆ ನನ್ನತ್ತ ದೃಷ್ಟಿ ಬೀರಿದಾಗ.

''ಕೂತ್ಕೋ ಪರವಾಗಿಲ್ಲ. ನೀನಂದ ಬೇವರ್ಸಿಗಳ ಕತೆ. ಕೇಳು ಇಂಟರೆಸ್ಟಾಗಿದೆ.''

ಅವರಿಬ್ಬರಿಗೂ ನಾನಂದ ಮಾತಿನ ಅರ್ಥವಾದಂತಿಲ್ಲ. ಆದರೂ ತಕ್ಷಣ,

''ಸಾರಿ, ನಿಮ್ಮ ಜ್ವಗೂ ಅಂದ ಮಾತಲ್ಲ. ಯಾವುದಕ್ಕೇ ಹೋಲಿಸಿ ಅಂದೆ, ಅಶ್ರಫ್. ನಿಮ್ಮ ಉಪವಾಸ ಮುರಿಯೋ ಸಮಯ ಆಯ್ತು.''

''ಸಾಬ್, ಥೋಡಾ ವಕ್ತ್. ಬಡಾದೋಖಾ ಅಂದ್ನಲ್ಲಿ. ಇಲ್ಲಿ ಮಣ್ಣು ತೆಗ್ದು ರೂಢಿ ಇಲ್ಲ. ಮೈ ನೋವು. ಜರಾ ಬಂತು. ಡಾಕ್ಟ್ರು ಕಳಿದ್ರು, ಅವ್ರು ಗೋಲಿ ಕೊಟ್ರು. ರಕ್ತ ಉಚ್ಚೆ ಟೆಸ್ಟು ಮಾಡಿದ್ರು. ಜರಾ ಕಮ್ಮಿ ಆಯ್ತು. ಎಲ್ಡು ದಿನ ಬಿಟ್ಟು ನಿಂಗೆ ಟಿಬಿ ಐತೆ ವಾಪ್ಸು ಹೋಗು ಅಂದ್ರು. ವಾಪ್ಸು ಕಳ್ಸೇ ಬಿಟ್ರು....''

''ಇರು, ಇರು ಒಂದ್ನಿಮಿಷ. ಜ್ವರ ಅಂದ್ಯಲ್ಲ. ಎಷ್ಟು ದಿನ ಜ್ವರ ಬಂತು.''

''ಒಂದೇ ದಿನ ಸಾಬ್.''

''ಸರಿಯಾಗಿ ಯೋಚ್ನೆ ಮಾಡು. ಕೆಮ್ಮು ಕಫ ಚಳಿ ಜ್ವರ...''

''ಏನೂ ಇಲ್ಲ. ಬಾಂಬೇ ತಾವ ಮೆಡಿಕಲ್ಲು ಪಾಸು ಆಯ್ತಲ್ಲಾ ಡಾಕ್ಟ್ರೇ.'' ನಾನು ನಿರಂಜನನ ಮುಖ ನೋಡಿದೆ; ಅವನು ಅಶ್ರಫನ ಮುಖ. ಅವನಿಗೂ ಸರಿಯಾಗಿ ಅರ್ಥವಾಗಿರಲಿಕ್ಕಿಲ್ಲ.

''ಅರವತ್ತು ಸಾವ್ರ ಲುಕ್ಸಾನು. ಒಂದು ಆಟೋ ಇತ್ತು. ಮಾರ್ದೆ. ಮನೆ ಗಿರ್ವಿ ಹಾಕ್ದೆ. ಎಲ್ಲಾ ಹೋಯ್ತು. ಇಲ್ಲೇ ಮೆಡಿಕಲ್ಲು ನಪಾಸು ಮಾಡಿದ್ರೆ ಕಾಸಾದ್ರೂ ಮಿಗ್ತಿತ್ತು. ಇಲ್ಲಿ ಕಾಸು ಕಿತ್ಕಂಡು ಸುಮ್ಕೇ ಪಾಸು ಮಾಡಿದ್ರು. ನನ್ನ ಲುಕ್ಸಾನು ಯಾರೂ ಭರ್ತಿ ಮಾಡೋದು. ಬಾಂಬೆನಾಗೇ ಮೆಡಿಕಲ್ಲು ಮೇಲೆ ಕೇಸು ಹಾಕ್ಬೇಕು ಸಾಬ್. ಕಂಪ್ಲೇಂಟು ಬರ್ಕೊಡೀಂತ ಬಂದೆ.''

''ಅಲ್ಲ ಅಶ್ರಫ್, ಅರವತ್ತು ಸಾವಿರ ತಾನೇ ಬಾಕಿ. ಪರ್ವಾಗಿಲ್ಲ ಅಲ್ಲಾನ ಮನೆ ತಾನೇ ಹೋಗಿ ಬಂದದ್ದು. ಪುಣ್ಯ ಬಂದ ಹಾಗಾಯ್ತು. ಇನ್ನ್ಯಾಕೆ ಕಂಪ್ಲೈಂಟು ?''

''ಸಾಬ್ ನೀವು....'' ಎಂದ ಅವನು ಮುಂದೆ ಮಾತನಾಡುವುದಿಲ್ಲ.

''ಅಶ್ರಫ್, ನೋಡು ನಿನಗೆ ಅನ್ಯಾಯ ಆಗಿದೆ. ಒಪ್ಕೋತೀನಿ ನಾನು. ಆದ್ರೆ ಯಾರ ವಿರುದ್ಧ ನೀನು ಹೋರಾಡ್ತೀಯ ? ಇಲ್ಲಿ ಯಾವ ಕಾಯಿಲೇನೂ ಇಲ್ಲ ಅಂದಿದ್ರು. ಅಲ್ಲಿ ಇದೆ ಅಂದ್ರು. ಯಾರನ್ನು ನಂಬೋದು. ಒಂದ್ಕೆಲ್ಸ ಮಾಡು. ಇನ್ನೊಂದ್ಸಲ ಇಲ್ಲಿ ಎಲ್ಲಾ ಟೆಸ್ಟ್ ಮಾಡ್ಸು. ಬರ್ಕೊಡ್ತೀನಿ. ಏನು ಅನ್ನೋದು ತಿಳಿಯುತ್ತೆ. ಮುಂದೆ ಏನು ಮಾಡೋಣ ಅನ್ನೋದನ್ನ ಆ ಮೇಲೆ ಯೋಚಿಸೋಣ. ಈಗ ಸೆಹ್ರಿ ಟೈಮ್ ಆಯ್ತು.''

ರಕ್ತಪರೀಕ್ಷೆ, ಮಾಂಟೋ ಪರೀಕ್ಷೆ, ಎದೆಗೂಡಿನ ಎಕ್ಸ್‌ರೇ ಎಲ್ಲಾ ಚೀಟಿಯಲ್ಲಿ ಬರೆದು ಅವನ ಕೈಯಲ್ಲಿತ್ತು ಬೆಲ್‌ಹೊಡೆದಾಗ ಬಂದ ಗೋಪಿಗೆ,

''ಇನ್ಯಾರಾದ್ರೂ ಇದ್ರೆ ಕಳ್ಸು'' ಎಂದೆ. ಅಂದರೆ ಅವನನ್ನು 'ಇನ್ನು ನೀನು ಹೋಗು ಅಂದಂತೆ.'

ಸೆಪ್ರಿ ಸಮಯ. ಈ ಕಡೆ ಎಳ್ಳು ಬೀರಿ ಆಗಿಲ್ಲವೇನೋ. ಯಾರೂ ಇಲ್ಲದ ಕಾರಣ ಶಟರ್ಸ್ ಎಳೆಯಲು ಹೇಳಿ ನಿರಂಜನನ ಜೊತೆ ಹೊರಗೆ ಹೊರಟೆ. ನಿರಂಜನ ಸಿಗರೇಟ್ ಹಚ್ಚುತ್ತಾ, ''ಏನಯ್ಯಾ, ಆ ಸಾಬಿ ಗೋಳು ?''

''ನೀನು ಆಗ ಅಂದ್ಯಲ್ಲಾ ಬೇವಾರ್ಸಿಗಳು ಅಂತಾ. ಅವರ ಕತೆ ಗೋಳು. ನಾರ್ತ್‌ನವ್ರು, ಈಸ್ಟ್‌ನವ್ರು, ವೆಸ್ಟ್‌ನವ್ರು ಅಂತೆಲ್ಲಾ ಆಗ ಅಂದ್ಯಲ್ಲ... ನಮ್ಮವ್ರು ಬೇರೆ ಕಡೆ ಹೋಗಿಲ್ವಾ. ಅವ್ರೆಲ್ಲಾ ಯಾಕೆ ಹೋದ್ರು ? ಅಮೆರಿಕದಲ್ಲಿ ಇಂಗ್ಲೆಂಡಿನಲ್ಲಿ ಗಲ್ಫಲ್ಲಿ, ಸಿಂಗಾಪುರದಲ್ಲಿ ಎಲ್ಲಿ ನೋಡಿದ್ರು ನಮ್ಮವ್ರು ಇಲ್ವಾ ? ಹಾಗಾದ್ರೆ ಅವ್ರೆಲ್ಲಾ ಬೇವಾರ್ಸಿಗಳಾ? ನಮ್ಮಲ್ಲೇ ಮಂಗ್ಳೂರು ಕಡೆಯವ್ರು ಹೋಟೆಲ್ ಇಂಡಸ್ಟ್ರಿ ಮಾಡಿದ್ರಲ್ಲಾ ಅವ್ರು ಬೇವರ್ಸಿಗಳಾ? ಈ ಬೆಂಗಳೂರಲ್ಲೇ ಸುತ್ತಮುತ್ತ ಊರಿಂದ ಬಂದವ್ರೆಲ್ಲಾ ಇಲ್ವಾ ಅವರುಗಳೂ...''

''ಸಾಕಯ್ಯ ನಿನ್ನ ಪುರಾಣ. ನಿಲ್ಸು. ಇಷ್ಟೊಂದು ಕಾಸು ಸುರ್ದು. ಜಾಗ ಕೊಂಡ್ಕೊಂಡ ಹೊಟ್ಟೆ ಉರಿಗೆ ಏನೋ ಮಾತು ಅಂದ್ರೆ ಅದನ್ನೇ ಲಾಯರುತರ ಬಾಲ ಸೇರ್ಸಿ ಬೆಳೆಸ್ತೀಯಲ್ಲಾ. ನೀನು ಡಾಕ್ಟ್ರಲ್ಲ, ಲಾಯರ್ ಆಗ್ಬೇಕಾಗಿತ್ತು.''

''ನಿನ್ನ ಸಂಕಟ ನನಗೆ ಅರ್ಥ ಆಗುತ್ತೆ. ಇದಕ್ಕೆಲ್ಲಾ ಕಾರಣ ಜನರ ವಲಸೆ ಅಲ್ಲ. ಅದರ ಹಿಂದೆ ಇರೋ ನಮ್ಮ ಕರಪ್ಟ್ ಸಿಸ್ಟಮ್, ಅದನ್ನ ಸರಿ ಮಾಡೋಕೆ ಆಗುತ್ತಾ ನೋಡು. ನನ್ನಿಂದ ನಿನ್ನಿಂದ ಖಂಡಿತ ಸಾಧ್ಯ ಇಲ್ಲ. ನೀನು ಅಂದ ಹಾಗೆ ಸ್ವಲ್ಪಾನೂ ವಯಲೇಶನ್ ಇಲ್ಲದೇ ಮನೆ ಕಟ್ಟೋಕೆ ಆಗಲ್ಲ. ಅದಕ್ಕಂತಾನೇ ಕಾಯ್ತಾ ಇರ್‍ತಾವೆ. ಆ ಬಕ ಪಕ್ಷಿಗಳು...''

''ರಣಹದ್ದುಗಳು. ಅಲ್ಲಯ್ಯ, ಆ ಸಾಬಿ ಕೇಸು ಏನನ್ಸತ್ತೆ ನಿನಗೆ''

''ಓ ನಿನ್ನ ತಲೆನಲ್ಲಿ ಇನ್ನು ಇದೆಯಾ ಅದು !''

''ಅವನು ಇಲ್ಲಿಯ ಮೆಡಿಕಲ್ ಟೀಂ ಮೇಲೆ ಕಂಪ್ಲೇಂಟ್ ಕೊಡ್ತೀನಿ ಅಂತಾನಲ್ಲ. ಅಲ್ಲಿಯ ರಿಪೋರ್ಟು ಯಾಕೆ ತಪ್ಪಿರಬಾರ್ದು ? ಅದು ಸರೀಂತ ಹೇಗೆ ಹೇಳ್ತಾನೆ ?''

''ಅಷ್ಟೆಲ್ಲಾ ಅರ್ಥ ಮಾಡಿಕೊಳ್ಳೋ ಸ್ಥಿತೀಲಿ ಅವನಿಲ್ಲ. ಅಲ್ಲಿ ಮೋಸ ಮಾಡಿದ್ರೂನೂ ಕೈಗೆ ನಾಲ್ಕೋ ಐದೋ ಸಾವಿರ ಇತ್ತಿದ್ದಾರೆ. ಇಲ್ಲಿ ಅರವತ್ತು ಸಾವಿರ ಕಿತ್ತುಕೊಂಡಿದ್ದಾರೆ. ಹೋಗ್ಲಿ. ಯಾವುದಕ್ಕೂ ಇಲ್ಲಿಯ ರಿಪೋರ್ಟು ಬರುತ್ತಲ್ಲಾ. ಆಗ ನೋಡ್ಕೊಂಡರಾಯ್ತು. ಅಂದ ಹಾಗೆ ನಾಡಿದ್ದು ಸಾಯಂಕಾಲ ಅವನು ಬರ್‍ತಾನೆ, ನೀನೂ ಬಂದ್ಬಿಡು ಆ ಸಮಯಕ್ಕೆ.''

ಮರುದಿನ ನನ್ನ ಕ್ಲಿನಿಕ್‌ನಲ್ಲಿ ಗುಲ್ಲೋ ಗುಲ್ಲು. ಒಬ್ಬಟ್ಟು ತಿಂದದ್ದು ಎಳ್ಳು ಬೀರಿದ್ದು, ಬಿರಿಯಾನಿ ಮುಕ್ಕಿದ್ದು ಎಲ್ಲಾ ಕಕ್ಕಿಕೊಂಡು ವಾಂತಿ ಭೇದಿ, ಶೀತ ಜ್ವರ. ಅದರ ಮರುದಿನವೂ ಅಂತೆ ನಿರಂಜನ ಬಂದವ ರೋಗಿಗಳ ಗುಂಪು ಕಂಡು ಹಿಂದೆ

ಹೋದ. ಅಶ್ರಫ್ ಸುಳಿವು ಇಲ್ಲ. ಹತ್ತು ಗಂಟೆಯ ಮೇಲಾಗಿರಬಹುದು. ಕ್ಲಿನಿಕ್ ಮುಚ್ಚುವ ಸಮಯ ಅಶ್ರಫ್ ಒಳಬಂದ.

"ಏನಪ್ಪ ಇಷ್ಟು ಹೊತ್ತಿನಲ್ಲಿ ?"

"ಆಗ್ಲೇ ಬಂದೆ ಸಾಬ್, ಜನ ಜಾಸ್ತಿ ಇತ್ತು. ವಾಪ್ಸು ಹೋದೆ"

"ಸರಿ ರಿಪೋರ್ಟ್ ಬಂತಾ ?"

"ಹ್ಞೂಂ ಸಾಬ್" ಎಂದು ಕೂತುಕೊಳ್ಳುತ್ತಾ ಆ ಹಾಳೆಗಳನ್ನು ನನ್ನತ್ತ ನೀಡಿದ. ನಿರಂಜನ ಆ ಸಮಯಕ್ಕೆ ಸರಿಯಾಗಿ ಸಿನೆಮಾದಲ್ಲಿ ಬರುವಂತೆ ಒಳಬಂದ.

"ನೀನು ಹ್ಯಾಗಯ್ಯಾ ಬಂದೆ ಈ ಸಮಯಕ್ಕೆ ಕರೆಕ್ಟಾಗಿ ?"

"ಆಗ್ಲೇ ಬಂದಿದ್ದೆ. ಗೋಪಿಗೆ ಹೇಳಿಹೋಗಿದ್ದೆ. ಇವ್ರು ಬಂದ ಒಡನೆ ನನಗೆ ಫೋನು ಮಾಡ್ದ."

ಒಂದೊಂದಾಗಿ ರಿಪೋರ್ಟು ನೋಡಿದೆ. ರಕ್ತ, ಮ್ಯಾಂಟೊ, ಕಫ, ಎಕ್ಸ್‌ರೇ ಎಲ್ಲಾ ನಾರ್ಮಲ್.

"ಅಶ್ರಫ್, ಎಲ್ಲಾ ನಾರ್ಮಲ್. ಅಂದ್ರೆ, ಬಾಂಬೇ ರಿಪೋರ್ಟು ಸರಿ. ಅಲ್ಲಿಯ ರಿಪೋರ್ಟು ತಪ್ಪು."

"ಅದು ಹ್ಯಾಗಾಗುತ್ತೆ ಸಾಬ್ ?"

"ಆಗಿದ್ಯಲ್ಲ ಈಗ. ನಂಬಿಕೆ ಇಲ್ದೇ ಇದ್ರೆ ಇನ್ನೊಂದ್ಸಲ ಮಾಡ್ಸು. ಇನ್ನೊಂದಷ್ಟು ಕಾಸು ಖರ್ಚು ಮಾಡು."

"ಹಾಗಲ್ಲ ಸಾಬ್...."

"ಈಗ ಯಾರ ಮೇಲೆ ಕಂಪ್ಲೈಂಟು ಬರ್ಕೊಡ್ಲಿ. ನಾಲ್ಕು ತಿಂಗ್ಳು ಕೆಲ್ಸ ಮಾಡ್ಸಿ ನಾಲ್ಕು ಸಾವಿರ ಕೈಯಲ್ಲಿತ್ತು. ಮೆಡಿಕಲಿ ಅನ್‌ಫಿಟ್ ಅಂತ ವಾಪಸ್ಸು ಕಳ್ಸಿದ್ರಲ್ಲಾ, ಈ ನೆಕ್ಸ್....."

ತಗ್ಗಿದ ತಲೆ ಮೇಲೆತ್ತಲಿಲ್ಲ.

"ಇವತ್ತು ಸೆಟ್ಟಿ, ಇಲ್ಲಾ ನಾನೇ ಎಷ್ಟು ಹೊತ್ತು ಬೇಕಾದ್ರೂ ಮಾತಾಡಬಹುದು." ಆದರೆ ವಿಚಾರ ಏನುಂಟು! ಅವನು ಹೋದ ಬಳಿಕ ನಿರಂಜನ ಅಂದ,

"ಏನಿಲ್ಲ ಅಂದ್ರೂ ಟಿ.ಬಿ. ಇಲ್ಲ ಅನ್ನೋ ಸಂತೋಷ ಆದ್ರೂ ಸಿಕ್ತಲ್ಲ."

"ಹೌದು ಬಟ್ ಎಟ್ ವಾಟ್ ಕಾಸ್ಟ್? ಅರುವತ್ತು ಸಾವಿರ, ಮೆಂಟಲ್ ಮತ್ತು ಫಿಸಿಕಲ್ ಆಗ್ಲಿ, ಮಾನವಂಚನೆ? ಇದೊಂದು ಬೆಲೆ ತೆರುವಷ್ಟು ದೊಡ್ಡ ವ್ಯಾಧಿ ಟಿ.ಬಿ. ಅಲ್ಲ."



ವರದಿ

# ಕೆ.ವಿ. ಸುಬ್ಬಣ್ಣ ಸಂಸ್ಮರಣೆ

"ಇತ್ತೀಚೆಗೆ ಕಣ್ಮರೆಯಾದ ಕೆ.ವಿ. ಸುಬ್ಬಣ್ಣನವರು ಶಿವರಾಮ ಕಾರಂತರಿಗೆ ತುಂಬಾ ಆಪ್ತರಾಗಿದ್ದವರು. ಅವರ ಹೆಸರಿನಲ್ಲಿ ರಂಗಮಂದಿರ ಕಟ್ಟಿದವರು. ಹಾಗಾಗಿ ಶಿವರಾಮ ಕಾರಂತ ವೇದಿಕೆ ಅವರ ನೆನಪಿನ ಕಾರ್ಯಕ್ರಮವನ್ನು ಹಮ್ಮಿಕೊಂಡಿರುವುದು ಔಚಿತ್ಯಪೂರ್ಣವಾಗಿದೆ.

ಸಾಹಿತ್ಯ, ಸಂಗೀತ, ನಾಟಕ, ಚಲನಚಿತ್ರ, ಸಂಸ್ಕೃತಿ, ಚಿಂತನೆ, ಜನಪರ ಹೋರಾಟ ಮುಂತಾದ್ದರಲ್ಲೆಲ್ಲಾ ತಮ್ಮದೇ ಆದ ಉನ್ನತ ಸಾಧನೆಗಳನ್ನು ಮಾಡಿದವರು ಹಲವರಿರ ಬಹುದು. ಆದರೆ ಇವೆಲ್ಲವನ್ನೂ ಸಮಗ್ರೀಕರಿಸಿ, ಒಂದು ವಿಶಿಷ್ಟ ನೇಯ್ಗೆಯ ಸಾಂಸ್ಕೃತಿಕ ವಾತಾವರಣವನ್ನು ಹೆಗ್ಗೋಡಿನಂತಹ ಹಳ್ಳಿಯಲ್ಲಿ ಸೃಷ್ಟಿಸಿದ್ದು ಸುಬ್ಬಣ್ಣನವರ ಅನನ್ಯ ಸಾಧನೆ.

ಅವರು ಮೈಸೂರಿನಲ್ಲಿ ಮಹಾರಾಜ ಕಾಲೇಜಿನ ಸಮೃದ್ಧ ಸಾಂಸ್ಕೃತಿಕ ವಾತಾವರಣದ ವಿಶಿಷ್ಟ ಸಂಸ್ಕಾರವನ್ನು ಹೀರಿಕೊಂಡು ಆನರ್ಸ್ ಮುಗಿಸಿ ಹುಟ್ಟೂರಿಗೆ ಮರಳಿ, ಅಲ್ಲಿನ ಜೀವನದಲ್ಲಿ ಒಂದಾಗಿ ಬದುಕುತ್ತಾ, ಬೆಳೆಯುತ್ತಾ, ಅದಕ್ಕೆ ಅಲ್ಲಿಯೇ ಹೊಸ ಆಯಾಮಗಳನ್ನು ನೀಡಿ ಸಂಸ್ಕೃತಿಯನ್ನು ಬೆಳೆಸಿದವರು. ಅಕ್ಷರ ಪ್ರಕಾಶನ, ನೀನಾಸಂ, ಚಲನಚಿತ್ರ ರಸಗ್ರಹಣ ಶಿಬಿರ ಮುಂತಾದ ಬಹುಮುಖ ಚಟುವಟಿಕೆಗಳನ್ನು ಅರ್ಧ ಶತಮಾನಗಳ ಕಾಲ ಅವ್ಯಾಹತವಾಗಿ ನಡೆಸಿದರು. ಅದು ಯಾವುದೇ ನೀಲನಕ್ಷೆ ತಯಾರಿಸಿಕೊಂಡು ಯೋಜನಾಬದ್ಧವಾಗಿ ಮಾಡಿದ್ದಲ್ಲ. ಅವರ ಅದಮ್ಯ ಜೀವನ ಪ್ರೀತಿಯ ಸಹಜ ಬೆಳವಣಿಗೆಯಾಗಿತ್ತು. ಆದರೆ ಅದರ ಪರಿಣಾಮ, ಪ್ರಭಾವ ನಾಡಿನಾದ್ಯಂತ ಹರಡಿತು. ದೂರದ ಮ್ಯಾಗ್ಸೇಸೆ ನಾಡಿಗೂ ತಲುಪಿತು.

ಸುಬ್ಬಣ್ಣ ಮನುಷ್ಯರ ಸಮಾನತೆಯನ್ನು ದೃಢವಾಗಿ ನಂಬಿದ್ದ ವ್ಯಕ್ತಿ. ಜಗತ್ತಿನ ಅತ್ಯುತ್ತಮ ಕಲಾಕೃತಿಗಳನ್ನು ವಿದ್ಯಾವಂತರಷ್ಟೇ ಜನಸಾಮಾನ್ಯರೂ ಆಸ್ವಾದಿಸುವುದು ಸಾಧ್ಯ ಎಂದು ಮಾಡಿ ತೋರಿಸಿದರು. ಶಂಕರಾಚಾರ್ಯರು ಮಂಡನಮಿಶ್ರನ ಮನೆಗೆ ಹೋದಾಗ ಅಲ್ಲಿನ ಮರದಲ್ಲಿದ್ದ ಗಿಳಿಗಳೂ ವೇದಾಂತದ ಚರ್ಚೆ ಮಾಡುತ್ತಿದ್ದವಂತೆ. ಹಾಗೆ ಸುಬ್ಬಣ್ಣನವರ ಪರಿಶ್ರಮದಿಂದ ಹೆಗ್ಗೋಡಿನ ಹಳ್ಳಿಗರೂ ಸತ್ಯಜಿತ್‌ರೇ

ಮುಂತಾದ ಜಗತ್ತಿನ ಶ್ರೇಷ್ಠ ನಿರ್ದೇಶಕರ ಕಲಾಕೃತಿಗಳನ್ನು ಆಸ್ವಾದಿಸಿ ಚರ್ಚಿಸುವಂತಾಯಿತು. ಉತ್ತಮ ನಾಟಕ, ಸಿನೆಮಾಗಳನ್ನು ನೋಡಲು, ದೇಶದ ಶ್ರೇಷ್ಠ ವಿದ್ವಾಂಸರ ಉಪನ್ಯಾಸಗಳನ್ನು ಕೇಳಲು, ಸಾಗರ, ಶಿವಮೊಗ್ಗದಂತಹ ನಗರಗಳಿಂದ ಜನ ಹೆಗ್ಗೋಡಿನಂಥ ಹಳ್ಳಿಗೆ ಬರುವಂತಾಯಿತು. ಸುಬ್ಬಣ್ಣನವರು ಸಾಂಸ್ಕೃತಿಕ ವಾತಾವರಣವನ್ನು ಬೆಳೆಸಿದ ರೀತಿಯಿಂದ ಯಾವುದೇ ಸಾಂಸ್ಕೃತಿಕ ನೀತಿಯನ್ನೇ ಹೊಂದಿಲ್ಲದ ನಮ್ಮ ಸರಕಾರ ಕಲಿಯಬೇಕಾದ್ದು ಬಹಳಷ್ಟಿದೆ. ಆದರೆ ಸರಕಾರ ಅವರು ಕಟ್ಟಿದ 'ನೀನಾಸಂ' ಸಂಸ್ಥೆಗೇ ಈವರೆಗೆ ನೀಡುತ್ತಾ ಬಂದಿದ್ದ ಅನುದಾನವನ್ನು ನಿಲ್ಲಿಸಿದೆ. ಇದು ತೀರಾ ವಿಷಾದದ ಸಂಗತಿ.

ಸುಬ್ಬಣ್ಣನವರು ವೈಯಕ್ತಿಕ ಸಾಧನೆಗಿಂತ ಸಾಮಾಜಿಕ ಸಾಧನೆಗೆ ಒತ್ತುಕೊಟ್ಟವರು. ಅವರ ನೀನಾಸಂ ಸಂಸ್ಥೆಯಿಂದ ತರಬೇತಿ ಪಡೆದ ನೂರಾರು ಕಲಾವಿದರು ನಾಡಿನ ವಿವಿಧ ಕಡೆಗಳಲ್ಲಿ ಅಂಥದೇ ಸಂಘಟನೆಗಳನ್ನು ಕಟ್ಟಿ ಆ ಸಂಸ್ಕೃತಿಯನ್ನು ಬೆಳೆಸುತ್ತಿದ್ದಾರೆ. ಸರಕು ಸಂಸ್ಕೃತಿ ಹಾಗೂ ಜಾಗತೀಕರಣದ ದಾಳಿಗೆ ನಾವೆಲ್ಲಾ ತುತ್ತಾಗುತ್ತಿರುವ ಇಂದಿನ ಸನ್ನಿವೇಶದಲ್ಲಿ ನಮ್ಮ ಸಾಂಸ್ಕೃತಿಕ ಸಾಧನೆಗಳ ಮಾದರಿಗಳನ್ನು ಉಳಿಸಿ, ಜೀವಂತವಾಗಿರಿಸುವ ಒಂದು ದ್ವೀಪವಾಗಿ ಹೆಗ್ಗೋಡನ್ನು ಸುಬ್ಬಣ್ಣ ಬೆಳೆಸಿದರು. ತನ್ಮೂಲಕ ಸಾಂಸ್ಕೃತಿಕ ಜಗತ್ತಿನಲ್ಲಿ ಸದಾ ಬೆಳಗುವ ನಂದಾದೀಪವನ್ನು ಹಚ್ಚಿದರು. ಅವರು ಕಣ್ಮರೆಯಾದರೂ ಆ ದ್ವೀಪ ಜ್ವಲಂತವಾಗಿ ಉರಿಯುತ್ತಿದೆ. ಅದರಿಂದ ಅನೇಕ ಸಣ್ಣ ದೀಪಗಳೂ ಹೊತ್ತಿಕೊಂಡು ನಾಡಿನ ವಿವಿಧೆಡೆಗಳಲ್ಲಿ ಬೆಳಗುತ್ತಿವೆ.''

ಹೀಗೆಂದು ಖ್ಯಾತ ರಾಜಕಾರಣಿ, ಸಾಹಿತಿ ಹಾಗೂ ಸುಬ್ಬಣ್ಣನವರ ಆಪ್ತಮಿತ್ರರಾದ ಶ್ರೀ ಕೆ.ಎಚ್. ಶ್ರೀನಿವಾಸ ಅವರು ಶಿವರಾಮ ಕಾರಂತ ವೇದಿಕೆಯು ಸೆಪ್ಟೆಂಬರ್ 11ರಂದು ಏರ್ಪಡಿಸಿದ್ದ 'ಕೆ.ವಿ. ಸುಬ್ಬಣ್ಣ - ಒಂದು ನೆನಪು' ಸಮಾರಂಭದ ಮುಖ್ಯಅತಿಥಿಯಾಗಿ ಭಾಷಣ ಮಾಡುತ್ತಾ ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ಪ್ರೇಮಾಭಟ್ಟರು ಸುಬ್ಬಣ್ಣನವರ ನೆನಪುಗಳನ್ನು ಹಂಚಿಕೊಂಡರು. ಆರಂಭದಲ್ಲಿ ಶ್ರೀಮತಿ ಕೆ.ಎಸ್. ವೈಜಯಂತಿ ಅವರು ಪ್ರಾರ್ಥನಾ ಗೀತೆ ಹಾಡಿದರು. ವೇದಿಕೆಯ ಸದಸ್ಯ ಶ್ರೀ ಬಿ.ವಿ. ಕೆದಿಲಾಯರು ಸ್ವಾಗತ ಭಾಷಣ ಮಾಡಿ ಮುಖ್ಯಅತಿಥಿಗಳ ಪರಿಚಯ ಮಾಡಿದರು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಪಾ. ಚಂದ್ರಶೇಖರ ಚಡಗರು ಧನ್ಯವಾದವಿತ್ತರು. ಶ್ರೀ ಕೆ.ಎಸ್. ರಾಜಾರಾಂ ಅವರು ವ್ಯವಸ್ಥೆಗೊಳಿಸಿದ್ದ ಸುಬ್ಬಣ್ಣನವರ ಕುರಿತ ಛಾಯಾ ಚಿತ್ರ ಪ್ರದರ್ಶನ ಸಮಾರಂಭಕ್ಕೆ ಹೊಸಆಯಾಮ ನೀಡಿತ್ತು.



# ಮಹಾತ್ಮ ಹುತಾತ್ಮನಾದಂದು...

-ರವಿಕೃಷ್ಣಾರೆಡ್ಡಿ, ಕ್ಯಾಲಿಫೋರ್ನಿಯಾ

ಮಹಾತ್ಮಗಾಂಧಿ ಎಂದಷ್ಟೆ ಕರೆಸಿಕೊಳ್ಳುತ್ತಿದ್ದ ಆತ ಜನವರಿ 30, 1948 ಶುಕ್ರವಾರದ ದಿನ ಸತ್ತಾಗ ಶ್ರೀಮಂತಿಕೆ, ಆಸ್ತಿ, ಪದವಿ, ಅಧಿಕಾರದ ಹುದ್ದೆ, ಪಾಂಡಿತ್ಯದ ಹೆಚ್ಚುಗಾರಿಕೆ, ವೈಜ್ಞಾನಿಕ ಸಾಧನೆ, ಅಥವಾ ಯಾವುದೇ ಕಲೆಯ ವರ ಇಲ್ಲದಿದ್ದ ಒಬ್ಬ ಖಾಸಗಿ ಪ್ರಜೆ. ಆದರೂ, ಸರ್ಕಾರ ಮತ್ತು ಸೇನಾಪಡೆ ಎಪ್ಪತ್ತೆಂಟು ವರ್ಷದ, ಲಂಗೋಟಿಯಲ್ಲಿದ್ದ ಕಂದುಬಣ್ಣದ ಚಿಕ್ಕ ಮನುಷ್ಯನಿಗೆ ಗೌರವ ಸಲ್ಲಿಸಿದರು. ಭಾರತ ಸರ್ಕಾರಕ್ಕೆ 3441 ಪತ್ರಗಳು, ಎಲ್ಲವೂ ಸ್ವಯಂಪ್ರೇರಿತವಾಗಿ, ಸಹಾನುಭೂತಿ ವ್ಯಕ್ತಪಡಿಸಿ, ವಿದೇಶಗಳಿಂದ ಬಂದವು. ನೀತಿವಂತ ಗಾಂಧಿಯ ಜೀವನವನ್ನು ಹಂತಕನ ಗುಂಡುಗಳು ಅಂತ್ಯಗೊಳಿಸಿದಾಗ ಅಷ್ಟೇನೂ ನೈತಿಕ ಶ್ರೀಮಂತಿಕೆಯಿಂದ ಕೂಡಿರದ ನಾಗರಿಕತೆ ಮತ್ತಷ್ಟು ಬಡವಾಯಿತು. ''ಮಹಾತ್ಮಗಾಂಧಿ ಇಡೀ ಮನುಕುಲದ ಮನಸ್ಸಾಕ್ಷಿಯ ವಕ್ತಾರರಾಗಿದ್ದರು'' ಎಂದರು ಅಮೇರಿಕಾ ದೇಶದ ವಿದೇಶಾಂಗ ಮಂತ್ರಿ ಜನರಲ್ ಜಾರ್ಜ್ ಮಾರ್ಷಲ್.

ಪೋಪ್ ಪಿಯುಸ್, ಟಿಬೆಟ್ಟಿನ ದಲೈ ಲಾಮ, ಕ್ಯಾಂಟರ್ಬರಿಯ ಆರ್ಚ್‌ಬಿಷಪ್, ಲಂಡನ್‌ನ ಮುಖ್ಯ ರಬ್ಬೈ, ಇಂಗ್ಲೆಂಡಿನ ರಾಜ, ರಾಷ್ಟ್ರಪತಿ ಟ್ರೂಮನ್, ಚಿಯಾಂಗ್ ಕೈಷೇಕ್, ಫ್ರಾನ್ಸ್‌ನ ರಾಷ್ಟ್ರಪತಿ, ಆಪ್ಟ್ಯಾಕೆ, ಪ್ರಪಂಚದ ಎಲ್ಲಾ ಅತಿ ಮುಖ್ಯ ರಾಷ್ಟ್ರಗಳ (ಸೋವಿಯತ್ ರಷ್ಯ ಬಿಟ್ಟು) ಮತ್ತು ಬಹುಪಾಲು ಸಣ್ಣ ರಾಷ್ಟ್ರಗಳ ಮುಖ್ಯಸ್ಥರು ಗಾಂಧಿಯ ಅಂತ್ಯಕ್ಕೆ ಸಾರ್ವಜನಿಕವಾಗಿ ದುಃಖ ವ್ಯಕ್ತಪಡಿಸಿದರು.

ಫ್ರೆಂಚ್ ಸಮಾಜವಾದಿ ಲ್ಯೋನ್ ಬ್ಲಮ್ ಲಕ್ಷಾಂತರ ಜನರಿಗೆ ಅನ್ನಿಸಿದ್ದನ್ನು ಕಾಗದದ ಮೇಲೆ ಬರೆದಿಳಿಸಿದ. ''ನಾನು ಗಾಂಧಿಯನ್ನು ಎಂದೂ ನೋಡಲಿಲ್ಲ. ನನಗೆ ಆತನ ಭಾಷೆ ತಿಳಿದಿಲ್ಲ. ಆತನ ದೇಶದಲ್ಲಿ ಎಂದೂ ಕಾಲಿಡಲಿಲ್ಲ. ಆದರೂ, ತುಂಬಾ ಹತ್ತಿರದವರನ್ನು ಕಳೆದುಕೊಂಡರೆ ಆಗುವಷ್ಟು ದುಃಖ ಆಗುತ್ತಿದೆ. ಈ ಅಸಾಧಾರಣ ಮನುಷ್ಯನ ಸಾವಿನಿಂದಾಗಿ ಇಡೀ ಪ್ರಪಂಚವೇ ಶೋಕಾಚರಣೆಯಲ್ಲಿ ಮುಳುಗಿದೆ.''

ಮಹಾವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನ್ ದೃಢವಾಗಿ ಹೇಳಿದ್ದು: ''ಒಂದು ಶಕ್ತಿಶಾಲಿ ಜನ

ಬೆಂಬಲವನ್ನು ಕೇವಲ ವಾಡಿಕೆಯ ರಾಜಕೀಯ ತಂತ್ರ, ಮತ್ತು ಕುತಂತ್ರಗಳಿಂದ ಮಾತ್ರವಲ್ಲದೆ ಜೀವನದ ಅತ್ಯುತ್ತಮ ನೈತಿಕ ಮಟ್ಟದ ನಡವಳಿಕೆಯಿಂದಲೂ ಕಟ್ಟಬಹುದು ಎಂದು ವಿಚಿತ್ರ ಉದಾಹರಣೆಯ ಮುಖಾಂತರ ಗಾಂಧಿ ತೋರಿಸಿ ಕೊಟ್ಟರು.''

ವಿಶ್ವಸಂಸ್ಥೆಯ ಭದ್ರತಾ ಮಂಡಳಿ ತನ್ನ ಸದಸ್ಯರು ಸತ್ತ ಮನುಷ್ಯನಿಗೆ ಗೌರವ ಸೂಚಿಸಲಿಕ್ಕಾಗಿ ಕಲಾಪವನ್ನು ಕೆಲಕಾಲ ಸ್ಥಗಿತಗೊಳಿಸಿತು. ಬ್ರಿಟಿಷ್ ಪ್ರತಿನಿಧಿ ಫಿಲಿಪ್ ನೋಯೆಲ್‌ಬೆಕರ್ ಗಾಂಧಿಯನ್ನು ''ಕಡುಬಡವನ, ಏಕಾಂಗಿಯ ಮತ್ತು ಸೋತವನ ಸ್ನೇಹಿತ ಎಂದು ವರ್ಣಿಸಿ ಗಾಂಧಿಯ ಮಹತ್ಸಾಧನೆಗಳು ಇನ್ನು ಮುಂದೆಯೂ ಬರಲಿವೆ'' ಎಂದು ಪ್ರತಿಪಾದಿಸಿದ.

ಭದ್ರತಾ ಮಂಡಳಿಯ ಅನ್ಯ ಸದಸ್ಯರು ಗಾಂಧಿಯ ಆಧ್ಯಾತ್ಮಿಕ ಗುಣಗಳನ್ನು ಶ್ಲಾಘಿಸಿ ಶಾಂತಿ ಮತ್ತು ಅಹಿಂಸೆಯೆಡೆಗೆ ಆತನ ನಿಷ್ಠೆಯನ್ನು ಪ್ರಶಂಸಿಸಿದರು. ಸೋವಿಯತ್ ಒಕ್ಕೂಟದ ಆಂಡ್ರಿ ಗ್ರಾಮಿಕೊ ಗಾಂಧಿಯನ್ನು ಭಾರತದ ಉನ್ನತ ರಾಜಕೀಯ ನಾಯಕರಲ್ಲೊಬ್ಬರೆಂದು ವರ್ಣಿಸಿ ಆತನ ಹೆಸರು ಸುದೀರ್ಘ ಸಮಯ ತೆಗೆದುಕೊಂಡ ಭಾರತದ ಜನರ ರಾಷ್ಟ್ರೀಯ ವಿಮೋಚನಾ ಹೋರಾಟದ ಜೊತೆಗೆ ಎಂದಿಗೂ ಜೋಡಿಸಲ್ಪಡುತ್ತದೆ ಎಂದರು. ಸೋವಿಯತ್ ಉಕ್ರೇನ್‌ನ ಪ್ರತಿನಿಧಿ ಟಾರಾಸೆಂಕೊ ಸಹ ಗಾಂಧಿಯ ರಾಜಕಾರಣವನ್ನು ಒತ್ತುಕೊಟ್ಟು ಹೇಳಿದರು.

ವಿಶ್ವಸಂಸ್ಥೆ ತನ್ನ ಧ್ವಜವನ್ನು ಅರ್ಧಕ್ಕೆ ಕೆಳಗಿಳಿಸಿತು.

ಮಾನವತೆ ತನ್ನ ಧ್ವಜವನ್ನು ಕೆಳಗಿಳಿಸಿತು.

ಗಾಂಧಿಯ ಸಾವಿಗೆ ಜಗತ್ತಿನಾದ್ಯಂತದ ಪ್ರತಿಕ್ರಿಯೆಯೇ ಒಂದು ಮುಖ್ಯ ನೈಜ ಸಾಕ್ಷಿ; ಅದು ವ್ಯಾಪಕವಾಗಿ ಹರಡಿದ್ದ ಮನೋಭಾವ ಮತ್ತು ಅಗತ್ಯವನ್ನು ಅಭಿವ್ಯಕ್ತಗೊಳಿಸಿತು. ನ್ಯೂಯಾರ್ಕ್‌ನ ಪತ್ರಿಕೆಯ ಅಲ್ಬರ್ಟ್ ಡ್ಯೂಶ್ಚ್ 'ಗಾಂಧಿಯ ಸಾವಿಗೆ ಪೂಜ್ಯಭಾವನೆಯಿಂದ ಪ್ರತಿಸ್ಪಂದಿಸಿದ ಜಗತ್ತಿಗೆ ಇನ್ನೂ ಸ್ವಲ್ಪ ಭರವಸೆಯಿದೆ' ಎಂದು ಘೋಷಿಸಿ-

''ನವದೆಹಲಿಯ ದುರಂತವನ್ನು ಹಿಂಬಾಲಿಸಿದ ಆಘಾತ ಮತ್ತು ಪರಿತಾಪ ನಾವು ಸಂತತ್ವವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗದಿದ್ದರೂ ಅದನ್ನು ಗೌರವಿಸುತ್ತೇವೆ ಎಂಬುದನ್ನು ತೋರಿಸಿಕೊಟ್ಟಿತು'' ಎಂದರು.

ಅಮೇರಿಕಾದ ಸೆನೆಟರ್ ಆರ್ಥರ್ ವ್ಯಾಂಡೆನ್‌ಬರ್ಗ್ ಹೇಳಿದ್ದು 'ವಿನಯಶೀಲತೆ ಮತ್ತು ಸರಳ ಸತ್ಯಗಳನ್ನು ಗಾಂಧಿ ಸಾಮ್ರಾಜ್ಯಗಳಿಗಿಂತ ಶಕ್ತಿಶಾಲಿಯನ್ನಾಗಿ ಮಾಡಿದರು.' ಕಾದಂಬರಿಕಾರ ಪರ್ಲ್ ಬಕ್ ಗಾಂಧಿಯ ಹತ್ಯೆಯನ್ನು 'ಮತ್ತೊಂದು ಶಿಲುಬೆಗೇರಿಕೆ'

ಎಂದು ವರ್ಣಿಸಿದರು. ನ್ಯಾಯಾಧೀಶ ಫೆಲಿಕ್ಸ್ ಫ್ರಾಂಕ್‌ಫರ್ಟರ್ ಅದನ್ನು 'ಪ್ರಪಂಚದ ಸತ್ಯ ಪಡೆಗಳ ವಿರುದ್ಧದ ಅತಿ ಕ್ರೂರ ಹೊಡೆತ' ಎಂದರು.

ಗಾಂಧಿಯನ್ನು ಪ್ರಶಂಸಿಸುತ್ತಿದ್ದ ಆಡಳಿತಗಾರ ಮತ್ತು ರಾಜಕಾರಣಿಗಳಿಗೆ ತಮ್ಮ ಸ್ವಂತವೇ ನ್ಯೂನತೆಗಳನ್ನು ಕನಿಷ್ಠ ನೆನಪಿಸುವಷ್ಟಾದರೂ ಆಗಿದ್ದರಾತ.

ಕ್ಯಾಲಿಫೋರ್ನಿಯಾದ ಹದಿಮೂರು ವರ್ಷದ ಹುಡುಗಿ ಒಂದು ಕಾಗದದಲ್ಲಿ ಬರೆದಳು; ''ಗಾಂಧಿಯ ಸಾವನ್ನು ಕೇಳಿ ನನಗೆ ನಿಜವಾಗಿಯೂ ದಾರುಣ ದುಃಖವಾಯಿತು. ನನಗೆ ಆತನಲ್ಲಿ ಅಷ್ಟು ಆಸಕ್ತಿಯಿದೆ ಎಂದು ಎಂದೂ ತಿಳಿದಿರಲಿಲ್ಲ. ಆದರೆ ಆ ಮಹಾನ್‌ವ್ಯಕ್ತಿಯ ಸಾವಿನಿಂದ ನನಗೆ ಎಷ್ಟು ಅಸಂತೋಷವಾಗಿದೆ ಎಂದು ನನಗೇ ತಿಳಿಯಿತು.''

ನ್ಯೂಯಾರ್ಕಿನಲ್ಲಿ, ಹನ್ನೆರಡು ವರ್ಷದ ಹುಡುಗಿ ಅಡಿಗೆ ಮನೆಗೆ ಉಪಹಾರ ಸ್ವೀಕರಿಸಲು ಹೋಗಿದ್ದಳು. ಚಾಲನೆಯಲ್ಲಿದ್ದ ರೇಡಿಯೋ ಗಾಂಧಿಗೆ ಗುಂಡಿಟ್ಟ ಸುದ್ದಿ ತಂದಿತು. ಅದೇ ಕ್ಷಣದಲ್ಲಿ, ಆ ಚಿಕ್ಕ ಹುಡುಗಿ, ಮನೆಕೆಲಸದವಳು, ಮತ್ತು ತೋಟದ ಮಾಲಿ ಪ್ರಾರ್ಥನಾ ಸಭೆ ನಡೆಸಿದರು. ಪ್ರಾರ್ಥಿಸಿದರು ಮತ್ತು ಅತ್ತರು. ಅದೇ ರೀತಿ, ಪ್ರಪಂಚದಾದ್ಯಂತ ಲಕ್ಷಾಂತರ ಜನ ಗಾಂಧಿಯ ಸಾವನ್ನು ವೈಯಕ್ತಿಕ ನಷ್ಟವೆಂಬಂತೆ ಶೋಕಿಸಿದರು. ಅವರಿಗೆ ಯಾಕೆಂದೂ ಅಷ್ಟೇನೂ ಸರಿಯಾಗಿ ತಿಳಿದಿರಲಿಲ್ಲ; ಆತ ಏನನ್ನು ಪ್ರತಿನಿಧಿಸಿದ್ದ ಎಂದೂ ಸಹ ಚೆನ್ನಾಗಿ ಗೊತ್ತಿರಲಿಲ್ಲ. ಆದರೆ ಆತ 'ಒಳ್ಳೆಯ ಮನುಷ್ಯ' ನಾಗಿದ್ದ ಮತ್ತು ಒಳ್ಳೆಯವರು ವಿರಳ.

ಸರ್ ಸ್ಟಾಫರ್ಡ್ ಕ್ರಿಪ್ಸ್ ಬರೆಯುತ್ತಾರೆ. ''ಲೌಕಿಕ ವಸ್ತುಗಳ ಮೇಲೆ ಶಕ್ತಿಯುತ ಚೈತನ್ಯವನ್ನು ಇಷ್ಟು ಬಲಯುತವಾಗಿ ಮತ್ತು ಸಮಂಜಸವಾಗಿ ಯಾವುದೇ ಸಮಯ ದಲ್ಲಾಗಲಿ ಅಥವಾ ಕನಿಷ್ಠ ಇತ್ತೀಚಿನ ತಾವು ಶೋಕಿಸುತ್ತಿದ್ದಾಗ ಜನ ಗ್ರಹಿಸಿದ್ದು. ಅವರ ಸುತ್ತಮುತ್ತೆಲ್ಲ ಲೌಕಿಕ ವಸ್ತುಗಳು ಅಲೌಕಿಕ ಚೈತನ್ಯಕ್ಕಿಂತ ಬಲವಾಗಿದ್ದವು. ಆತನ ಮಿಂಚಿನಂತಹ ದಿಢೀರ್ ಸಾವು ವಿಶಾಲ ಕತ್ತಲನ್ನು ಅನಾವರಣಗೊಳಿಸಿತು. ಆತನ ನಂತರ ಜೀವಿಸಿದ ಯಾರೂ ಸತ್ಯವಂತ ಜೀವನವನ್ನು ಜೀವಿಸುವುದಕ್ಕಾಗಿ, ಕಕ್ಕುಲತೆ, ಸ್ವವ್ಯಕ್ತಿ ನಾಶ, ವಿನಯಶೀಲತೆ, ಸೇವೆ ಮತ್ತು ಅಹಿಂಸೆಯನ್ನು ಸುಧೀರ್ಘ ಕಾಲ, ಪ್ರಬಲ ಶತ್ರು ಗಳ ವಿರುದ್ಧದ ಕಷ್ಟಮಯ ಹೋರಾಟವನ್ನು, ಆತನಷ್ಟು ಕಠಿಣವಾಗಿ ಪ್ರಯತ್ನಿಸಲಿಲ್ಲ ಮತ್ತು ಅಷ್ಟು ಯಶಸ್ಸು ಪಡೆಯಲಿಲ್ಲ. ತನ್ನ ದೇಶದಲ್ಲಿನ ಬ್ರಿಟಿಷ್ ಆಡಳಿತದ ವಿರುದ್ಧದ ತನ್ನ ದೇಶದ್ದೇ ಜನರ ದುಷ್ಟತೆಯ ವಿರುದ್ಧ ಆತ ತೀವ್ರವಾಗಿ ಮತ್ತು ನಿರಂತರ ವಾಗಿ ಹೋರಾಡಿದ. ಆದರೆ ಯುದ್ಧದ ಮಧ್ಯದಲ್ಲಿ ತನ್ನ ಕೈಗಳನ್ನು ಪವಿತ್ರವಾಗಿಟ್ಟು ಕೊಂಡ. ಮತ್ಸರವಿಲ್ಲದೆ, ಢೋಂಗಿತನವಿಲ್ಲದೆ, ಅಥವಾ ದ್ವೇಷವಿಲ್ಲದೆ ಹೋರಾಡಿದ.

ಈ ಮೇಲಿನ ಸಾಲುಗಳು 1950ರಲ್ಲಿ ಪ್ರಕಟವಾದ, ಲೂಯಿ ಫಿಷರ್ ಎಂಬ ಪಾಶ್ಚಾತ್ಯ ಲೇಖಕ ಬರೆದ "The Life of Mahatma Gandhi" ಎಂಬ ಜೀವನ ಚರಿತ್ರೆ ಪುಸ್ತಕದ ಒಂದೆರಡು ಪುಟಗಳಲ್ಲಿ ಬರುವ ವಾಕ್ಯಗಳು. ಈ ಪುಸ್ತಕವನ್ನು ಅತ ಬರೆದದ್ದು ಇಂಗ್ಲೀಷ್ ಬಲ್ಲ ಅಮೇರಿಕನ್ ಹಾಗೂ ಪಾಶ್ಚಾತ್ಯ ಓದುಗರನ್ನು ಗಮನದಲ್ಲಿಟ್ಟುಕೊಂಡು. ಆದ್ದರಿಂದ ಅಮೇರಿಕನ್ನರಿಗೆ ಅಥವಾ ಪಾಶ್ಚಾತ್ಯರಿಗೆ ಪ್ರಸ್ತುತ ಮತ್ತು ಪರಿಚಿತವಿರುವ, ಅವರಿಗೆ ಮುಖ್ಯವೆನಿಸುವ ವ್ಯಕ್ತಿ-ವಿಷಯಗಳನ್ನು ತೆಗೆದುಕೊಂಡು ಆ ದೃಷ್ಟಿಕೋನದಲ್ಲಿ ನಿರೂಪಿಸಿರುವುದು.

ಶರಣರ ಗುಣವನ್ನು ಮರಣದಲ್ಲಿ ನೋಡೆಂಬಂತೆ, ಮೋಹನದಾಸ ಗಾಂಧಿ ಸತ್ತಾಗ ಜಗತ್ತು ಪ್ರತಿಕ್ರಿಯಿಸಿದ ರೀತಿ ಅನನ್ಯ. ಆದರೆ ಇಲ್ಲಿ ಆ ಅನನ್ಯತೆಗೆ ಕೇವಲ ಒಳ್ಳೆಯವರು ವಿರಳ ಎಂಬುದಷ್ಟೇ ಕಾರಣವಲ್ಲ ಎನ್ನುವುದು ಸ್ವಲ್ಪ ಆಲೋಚಿಸಿದರೆ ಎಲ್ಲರಿಗೂ ತಿಳಿಯುವ ಸರಳ ಸತ್ಯ. ಐವತ್ತಾರು ವರ್ಷಗಳ ಹಿಂದೆ ಗಾಂಧಿ ಸತ್ತ ದಿನವನ್ನು ಹುತಾತ್ಮರ ದಿನಾಚರಣೆಯನ್ನಾಗಿಸಿ ಕೈತೊಳೆದುಕೊಳ್ಳುವುದಕ್ಕಿಂತ ಸಮಕಾಲೀನ ಅಗತ್ಯಗಳಿಗೆ ತಕ್ಕಂತೆ ಗಾಂಧೀವಾದವನ್ನು ಸಾಣೆ ಹಿಡಿದುಕೊಂಡರೆ ಎಷ್ಟೋ ಸಮಸ್ಯೆಗಳಿಗೆ ನೀತಿಯುಕ್ತ, ಸತ್ಯ ಉತ್ತರ ಸಿಗುತ್ತದೆ.

ನಮ್ಮ ಅನಂತಾನಂತ ಅವತಾರಾಚಾರ್ಯ ಪುರುಷರು (?) ಹೇಳಿದಷ್ಟು ಕಠಿಣವಾಗಲಿ, ಅಮೂರ್ತವಾಗಿಯಾಗಲಿ ಗಾಂಧಿಯ ಚಿಂತನೆಗಳು ಇಲ್ಲ. ಹಾಗೆಯೇ ಗಾಂಧಿ ಹೇಳಿದ ಪ್ರತಿ ಅಕ್ಷರವೂ ಸರಿ, ಅದನ್ನು ಸಮಕಾಲೀನಕ್ಕೆ ತಕ್ಕಂತೆ ಪರಿಷ್ಕರಿಸಿ ಅಳವಡಿಸಿಕೊಳ್ಳುವ ಪ್ರಶ್ನೆಯೇ ಇಲ್ಲ ಎಂಬ ಮುಲ್ಲಾ ಮಠಾಧೀಶರ ಸ್ವತ್ತಾಗಿಯೂ ಗಾಂಧಿ ಉಳಿದಿಲ್ಲ. ತನ್ನಲ್ಲಿ ಹುಳುಕಗಳ ಜೊತೆಗೆ ಸಾರ್ವಜನಿಕವಾಗಿ ಜೀವಿಸಿದ, ಲೇಖಕ ಫಿಷರ್ ಹೇಳುವಂತೆ ಸ್ವವ್ಯಕ್ತಿನಾಶಕ್ಕೆ (Self-effacement) ಶ್ರಮಿಸಿದವನ ವ್ಯಕ್ತಿಪೂಜೆ ಮಾಡುವವರು ಅಪಹಾಸ್ಯಕ್ಕೆ ಈಡಾಗುವುದು ಸಹಜ. ಆದ್ದರಿಂದ ಗಾಂಧಿ-ಬುದ್ಧರ ಪುನರವತಾರಕ್ಕಾಗಿ ಕಾಯಬೇಕು ಎಂಬ ನಿರಾಶಾ ಮತ್ತು ಅಸಹಾಯಕ ಸ್ಥಿತಿಯಲ್ಲಿ ಬಿದ್ದು ಹೊಸ ಮಾರ್ಗಗಳನ್ನು ಹುಡುಕುವ, ಹುಟ್ಟು ಹಾಕುವ ಕೆಲಸ ಮಾಡದೆ ಗಾಂಧಿ-ಬುದ್ಧರಿಗೆ ಕಾಯುವುದು ಕರುಣಾಜನಕವೆನಿಸುವ ಸ್ಥಿತಿ. ಇತಿಹಾಸದ ಮಟ್ಟಿಗೆ ಹೇಳುವುದಾದರೆ ಮತ್ತೆ ನಾ ಬರುವೆ ಎಂದು ಇವರ್ಯಾರೂ ಹೇಳಿಲ್ಲ !!! ಸತ್ತವರಿಗೆ ಕಾಯುತ್ತಾ ಕೂರುವುದು ಮನುಷ್ಯ ಜಾತಿಯ ಕ್ರಿಯಾಶಕ್ತಿಯನ್ನೇ ಶಂಕಿಸಿದಂತೆ.

ನಮ್ಮ ದಾರಿ ನಾವೇ ಹುಡುಕಿಕೊಳ್ಳಬೇಕು. ಯಾಕೆಂದರೆ ಹುತಾತ್ಮರು ಪ್ರೇತಾತ್ಮರಲ್ಲ.



## ಅತಿಥಿ

-ಪ್ರೇಮಾಭಟ್

ಈ ಭೂಮಿ ಈ ನೆಲದ
ಕಾವು ಸುಮ್ಮನಲ್ಲ
ಈ ನೆಲದ ಮಗಳು
ಹಾರುತ್ತ ಹಾರುತ್ತ ದಿಗ್ವಿಜಯ
ಸಾಧಿಸಿಹಳು
ಆಕಾಶಯಾನದಲ್ಲಿ
ಅಳಿಸಿಹಾಕದೆ ಚಿತ್ರವನ್ನು
ಭಿತ್ತಿಯಲ್ಲಿ ಮೂಡಿಸಿ

ಈ ನೆಲದಲ್ಲಿ ಹುಟ್ಟಿ
ನೆಲದ ಸೊಬಗನ್ನು ಹೆಚ್ಚಿಸಿದ
ಯಾನ ಯಾತ್ರಿಕೆ
ಯಾತ್ರೆ ಮುಗಿಸಿ
ಹೋಗಿಬಿಟ್ಟಳು ತಿರುಗಿ ನೋಡದೆ
ಕಂಡವರ ಕಣ್ಣ ಕೂಸಾಗಿದ್ದವಳು
ಸೋಲರಿಯದವಳು
ಸಾಲತೀರಿಸಿ
ಯಾರಿಗೂ ಭಾರ ಹೊರಿಸದೆ
ಯಾನಯಾತ್ರೆ ಮಾಡುತ್ತಲೇ
ಕಾಣೆಯಾಗಿ ಬಿಟ್ಟಳು
ಹಾಗೆ ಬಂದು ಹೀಗೆ ಹೋಗುವ
ಅತಿಥಿಯಂತೆ ॥



## ಶ್ರದ್ಧಾಂಜಲಿ

**ಡಾ॥ ಬಿ.ಸಿ. ರಾಮಚಂದ್ರಶರ್ಮ**

ಇತ್ತೀಚೆಗೆ ಕಣ್ಮರೆಯಾದ ಕನ್ನಡದ ಪ್ರಮುಖ ನವ್ಯಕವಿ, ಕತೆಗಾರ ಹಾಗೂ ಅನುವಾದಕ ರಾಗಿದ್ದ ಶರ್ಮರು ಬಹುಕಾಲ ವಿದೇಶದಲ್ಲಿದ್ದರೂ ಕನ್ನಡದ ಕಾಯಕವನ್ನು ನಿಷ್ಠೆಯಿಂದ ಮಾಡಿದವರು. ನಿರ್ದಾಕ್ಷಿಣ್ಯ ಮಾತಿಗೆ, ನಿಖರ ವೈಚಾರಿಕತೆಗೆ ಹೆಸರಾದವರು. ಕನ್ನಡ ಸಾಹಿತ್ಯಕ್ಕೆ ಅವರು ನೀಡಿದ ಕೊಡುಗೆ ವಿಶಿಷ್ಟವಾದುದು. ಅವರಿಗೆ 'ಹಣತೆ' ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

★ ★ ★

**ಡಾ॥ ಎಚ್.ಎಲ್ ನಾಗೇಗೌಡ**

ಇತ್ತೀಚೆಗೆ ಕಣ್ಮರೆಯಾದ ಜಾನಪದ ತಜ್ಞ ಹಾಗೂ ಸಾಹಿತಿಯಾಗಿ ಪ್ರಸಿದ್ಧರಾದ ನಾಗೇಗೌಡರು ರಾಮನಗರದಲ್ಲಿ ಕಟ್ಟಿಬೆಳೆಸಿರುವ 'ಜಾನಪದ ಲೋಕ' ಕನ್ನಡ ಸಂಸ್ಕೃತಿಗೊಂದು ಮಹತ್ವದ ಕೊಡುಗೆಯಾಗಿದೆ. ವೃತ್ತಿಯಲ್ಲಿ ಐಎಎಸ್ ಅಧಿಕಾರಿ ಯಾಗಿದ್ದರೂ ಅವರು ಜಾನಪದ ಕ್ಷೇತ್ರದಲ್ಲಿ ಮಾಡಿರುವ ಕೆಲಸ ಅನನ್ಯವಾದುದು. ಅವರಿಗೆ 'ಹಣತೆ'ಯ ಶ್ರದ್ಧಾಂಜಲಿ.

Published by- P.C. CHADAGA, Secretary, Shivarama Karantha Vedike (R)
'Adarsha', #307, 17th Cross, 2nd Block, R.T. Nagar, Bangalore-560 032
Ph: 23336822 / 23336087, Edited by - B.V. KEDILAYA
Printed at - RAVI SCREENS, Vijayanagar, Bangalore-40 - Ph: 23395871